

# ಕನ್ನಡ ವಿಶ್ವವಿದ್ಯಾಲಯ
## ಹಂಪಿ

೨೦೧೫-೧೬ನೇ ಸಾಲಿನಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಎಂ.ಫಿಲ್. ಪದವಿಗಾಗಿ ಅರ್ಪಿಸಿದ ನಿಬಂಧ

# ಬೇಂದ್ರೆ ಅವರ ಕಾವ್ಯದಲ್ಲಿ ದಾಂಪತ್ಯದ ಪರಿಕಲ್ಪನೆ


ನಿಬಂಧಕಾರರು

**ಶೈಲಜಾ ಕೆ.ವಿ.**

ನೋಂದಣಿ ಸಂಖ್ಯೆ : 150901030050

ಕನ್ನಡ ಎಂ.ಫಿಲ್ ವಿದ್ಯಾರ್ಥಿ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎಚ್.ಪಿ.ಗೀತಾ**

ಕನ್ನಡ ಸಹ ಪ್ರಾಧ್ಯಾಪಕರು

ಸರ್ಕಾರಿ ಪ್ರಥಮದರ್ಜೆ ಕಾಲೇಜು

ಕುವೆಂಪುನಗರ, ಮೈಸೂರು



ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

೨೦೧೫-೧೬



# ಕನ್ನಡ ವಿಶ್ವವಿದ್ಯಾಲಯ
## ಹಂಪಿ



೨೦೧೫-೧೬ನೇ ಸಾಲಿನಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಎಂ.ಫಿಲ್. ಪದವಿಗಾಗಿ ಅರ್ಪಿಸಿದ ನಿಬಂಧ

# ಬೇಂದ್ರೆ ಅವರ ಕಾವ್ಯದಲ್ಲಿ ದಾಂಪತ್ಯದ ಪರಿಕಲ್ಪನೆ

ನಿಬಂಧಕಾರರು

**ಶೈಲಜಾ ಕೆ.ವಿ.**

ನೋಂದಣಿ ಸಂಖ್ಯೆ : 150901030050
ಕನ್ನಡ ಎಂ.ಫಿಲ್ ವಿದ್ಯಾರ್ಥಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎಚ್.ಪಿ.ಗೀತಾ**

ಕನ್ನಡ ಸಹ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮದರ್ಜೆ ಕಾಲೇಜು
ಕುವೆಂಪುನಗರ, ಮೈಸೂರು

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೧೫-೧೬

## ಮಾರ್ಗದರ್ಶಕರ ಪ್ರಮಾಣಪತ್ರ

೨೦೧೫-೧೬ನೆಯ ಸಾಲಿನಲ್ಲಿ ಕ್ರಮ ಸಂಖ್ಯೆ: KVTM/K 150901030050ರ ಹಂಪಿ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್ ಪದವಿಯ ವಿದ್ಯಾರ್ಥಿಯಾದ **ಶೈಲಜಾ ಕೆ.ವಿ.** ಅವರು ನನ್ನ ಮಾರ್ಗದರ್ಶನದಲ್ಲಿ **"ಬೇಂದ್ರೆ ಅವರ ಕಾವ್ಯದಲ್ಲಿ ದಾಂಪತ್ಯದ ಪರಿಕಲ್ಪನೆ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್ ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಈ ನಿಬಂಧವನ್ನು ಈ ಮೊದಲು ಯಾವುದೇ ಬಗೆಯ ಪದವಿ, ಡಿಪ್ಲೊಮಾ ಅಥವಾ ಯಾವುದೇ ತತ್ಸಮಾನ ಪರೀಕ್ಷೆಗಳಿಗಾಗಿ ಯಾವ ವಿಶ್ವವಿದ್ಯಾಲಯಕ್ಕೂ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಮೈಸೂರು
ದಿನಾಂಕ: ೨೦-೦೭-೨೦೧೬

**ಡಾ. ಎಚ್.ಪಿ.ಗೀತಾ**
ಕನ್ನಡ ಸಹ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮದರ್ಜೆ ಕಾಲೇಜು
ಕುವೆಂಪುನಗರ, ಮೈಸೂರು

## ಅಭ್ಯರ್ಥಿಯ ಘೋಷಣಾ ಪತ್ರ

**"ಬೇಂದ್ರೆ ಅವರ ಕಾವ್ಯದಲ್ಲಿ ದಾಂಪತ್ಯದ ಪರಿಕಲ್ಪನೆ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಹಂಪಿ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್ ಪದವಿಯ ಕ್ರಮ ಸಂಖ್ಯೆ: KVTM/K 150901030050ರ ವಿದ್ಯಾರ್ಥಿಯಾದ ನಾನು ೨೦೧೫-೧೬ನೆಯ ಸಾಲಿನ ಪರೀಕ್ಷೆಗಾಗಿ **ಡಾ. ಎಚ್.ಪಿ.ಗೀತಾ, ಕನ್ನಡ ಸಹ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮದರ್ಜೆ ಕಾಲೇಜು, ಕುವೆಂಪುನಗರ, ಮೈಸೂರು** ಇವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ತತ್ಸಮಾನ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Shylaja K.V.

ಮೈಸೂರು
ದಿನಾಂಕ: ೨೦-೦೭-೨೦೧೬

**(ಶೈಲಜಾ ಕೆ.ವಿ.)**
೨೦೧೫-೧೬ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ಪರಿವಿಡಿ

## ಬೇಂದ್ರೆ ಅವರ ಕಾವ್ಯದಲ್ಲಿ ದಾಂಪತ್ಯದ ಪರಿಕಲ್ಪನೆ



*****

# ಅಧ್ಯಾಯ – ೧

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯ ಲೋಕದ ಮೇರುಕವಿ 'ಬೇಂದ್ರೆ' ಅವರು 'ಶಬ್ಧಗಾರುಡಿಗ', 'ವರಕವಿ' ಎಂತಲೇ ಪ್ರಸಿದ್ಧಿಹೊಂದಿದ್ದಾರೆ. ಇವರ ಸಾಹಿತ್ಯವು ಹಿಮಾಲಯ ಪರ್ವತದಷ್ಟು ಎತ್ತರವನ್ನು, ಸಾಗರದಷ್ಟು ಆಳವಿಸ್ತಾರವನ್ನೂ ಪಡೆದುಕೊಂಡಿದೆ. ಇವರು ಹಲವಾರು ಕವನಸಂಕಲನಗಳು, ವಿಚಾರ ವಿಮರ್ಶೆ, ಕಥಾಸಂಕಲನ, ಹರಟೆ, ಅನುವಾದ ಹೀಗೆ ಒಟ್ಟು ಎಪ್ಪತ್ತಕ್ಕೂ ಹೆಚ್ಚು ಕೃತಿಗಳನ್ನು ನೀಡುವುದರ ಮೂಲಕ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಆದರೂ ಬೇಂದ್ರೆಯವರು ಕವಿಯಾಗಿಯೇ ಪ್ರಸಿದ್ಧರು.

ಬೇಂದ್ರೆಯವರ ಕಾವ್ಯಗಳ ಬಗ್ಗೆ ಎಷ್ಟೇ ಅಧ್ಯಯನಗಳು ನಡೆದಿದ್ದರೂ ಹೇಳಬೇಕಾದುದು ಇನ್ನೂ ಇದೆ ಎಂಬಂತೆ ಅನಿಸುತ್ತದೆ. ಅವರು ಕೇವಲ ಯಾವುದೋ ಸೀಮಿತ ನೆಲೆಗೆ ಅಂಟಿಕೊಂಡವರಲ್ಲ. ಆದರೂ ಉಪನಿಷತ್ತುಗಳು, ಸಂಖ್ಯೆ, ಅನುಭವ, ಅರವಿಂದರು ಮತ್ತು ಪಾಶ್ಚಾತ್ಯಚಿಂತಕರಾದ ಎಮರ್ಸನ್‌ರವರ ವಿಚಾರಧಾರೆಗಳ ಪ್ರಭಾವಕ್ಕೆ ಅವರು ಒಳಗಾಗಿದ್ದು, ಭಾರತೀಯ ರಸಸಂಪ್ರದಾಯದಲ್ಲಿ ಅತೀವ ಶ್ರದ್ಧೆಯಿರಿಸಿಕೊಂಡ ಬೇಂದ್ರೆ 'ಕಾವ್ಯಮಾನಂದಾಯ'ವೆಂದೇ ನಂಬಿದ್ದರು. ಈ ದೃಷ್ಟಿಯಿಂದ ಬೇಂದ್ರೆಯವರಿಗೆ ಕಾವ್ಯ ಮತ್ತು ಜೀವನ ಬೇರೆ ಬೇರೆಯಾಗಿ ತೋರಲಿಲ್ಲ. ಬದುಕನ್ನು ಅವು ಎದುರಾಗುವ ರೀತಿಯಲ್ಲಿಯೇ ಪ್ರೀತಿಯಿಂದ ಸ್ವೀಕರಿಸುವ ದೃಷ್ಟಿ ಅವರದಾಗಿತ್ತು. ಹೀಗಾಗಿ ಬದುಕಿನ ಎಲ್ಲಾ ಮುಖಗಳು ಅವರ ಕಾವ್ಯಗಳಲ್ಲಿ ಮೂರ್ತಗೊಂಡಿವೆ. ಹಿಗ್ಗು–ಕುಗ್ಗು, ನೋವು–ನಲಿವು, ಪ್ರೀತಿ–ದ್ವೇಷ, ಪ್ರೇಮ–ಕಾಮ, ಬಡತನ–ಸಿರಿತನ, ಅಧ್ಯಾತ್ಮ, ಸೌಂದರ್ಯ, ಸೊಬಗು, ಪ್ರಕೃತಿ ಎಲ್ಲವನ್ನೂ ನೋಡತೊಡಗಿದ್ದಾರೆ. ಹೀಗೆ ಬೇಂದ್ರೆಯವರ ಕಾವ್ಯಗಳ ವಿವಿಧ ಮಜಲುಗಳಲ್ಲಿ ಬಹುಮುಖ್ಯವಾದ ದಾಂಪತ್ಯದ ಬಗೆಗಿನ ಕವಿಯ ನೋಟ, ಕಾಣ್ಕೆಯನ್ನು ಅಧ್ಯಯನ ಮಾಡುವುದು ಈ ನಿಬಂಧದ ಉದ್ದೇಶವಾಗಿದೆ.

ನವೋದಯ ಕಾವ್ಯಪರಂಪರೆಯ ಹಿರಿಯ ಕವಿಗಳು ಹೊಸಕಾವ್ಯ ಮಾರ್ಗದ ಕಡೆಗೆ ಸಾಗಿದಂತೆ, ಆ ಮಾರ್ಗ ಹೊಸ ಹೊಸ ಪ್ರಯೋಗಗಳಿಗೆ ತೆರೆದುಕೊಳ್ಳತೊಡಗಿತು. ಬಹುಪಾಲು ಕವಿಗಳು ತಮ್ಮ ವಿಸ್ತೃತವಾದ ಬದುಕಿನ ವೈಪರೀತ್ಯಗಳನ್ನು ಚಿತ್ರಿಸಲು ಈ ಕಾವ್ಯಗಳನ್ನೇ ಆಯ್ದುಕೊಂಡರು. ಮಧುರವಾದ ಭಾವಗೀತೆಗಳನ್ನು ರಚಿಸುವುದರ ಮೂಲಕ ತಮ್ಮ ಜೀವನದ ಎಲ್ಲಾ ಮುಖಗಳನ್ನು ಸಹೃದಯರ ಕೈಗಿತ್ತರು. ಯಾವುದೇ ಯುಗದ ಸೃಷ್ಟಿಯ ಹಾದಿಯು ಹತ್ತಾರು ಕವಿವರ್ಯರ ಸೃಜನಶೀಲ ಕೊಡುಗೆ. ಆದರೆ ಕೆಲವರಲ್ಲಿ ಮಾತ್ರ

ಅದರ ನಿಜ್ಜಳ ಸ್ವರೂಪ ಕಾಣಿಸಿಕೊಳ್ಳುವುದು. ಇಲ್ಲಿ ಬೇಂದ್ರೆಯವರ ಕಾವ್ಯಗಳಲ್ಲಿರುವ ದಾಂಪತ್ಯದ ಪರಿಕಲ್ಪನೆಯನ್ನು ಪ್ರಧಾನವಾಗಿ ಚರ್ಚಿಸಲಾಗಿದೆ. ಬೇಂದ್ರೆ ಕಾವ್ಯದ ಅಧ್ಯಯನವೇ ಏಕೆಂಬ ಪ್ರಶ್ನೆ ಈ ಸಂದರ್ಭದಲ್ಲಿ ಬರಬಹುದು. ಈ ನಿಬಂಧದ ಒಂದು ಅಧ್ಯಾಯದಲ್ಲಿ ಮತ್ತಷ್ಟು ನವೋದಯ ಕವಿಗಳ ಕಾವ್ಯಗಳಲ್ಲಿನ ದಾಂಪತ್ಯದ ಚಿತ್ರಣವನ್ನು ವಿಶ್ಲೇಷಿಸಿದ್ದರೂ, ನನ್ನ ಮನಸೆಳೆದಿದ್ದು ಬೇಂದ್ರೆಯವರ ಕಾವ್ಯಗಳಲ್ಲಿರುವ ದಾಂಪತ್ಯದ ಚಿತ್ರಣ. ಅದಕ್ಕಾಗಿ ಬೇಂದ್ರೆಯವರ ಕಾವ್ಯಗಳನ್ನು ಇಲ್ಲಿ ಪ್ರಧಾನವಾಗಿ ವಿಶ್ಲೇಷಿಸಲಾಗಿದೆ.

ಆಧುನಿಕ ಕನ್ನಡ ಕಾವ್ಯಗಳಲ್ಲಿ ಪ್ರಣಯಗೀತೆಗಳು ಅಸಂಖ್ಯಾತವಾಗಿ ರಚನೆಗೊಂಡಿವೆ. ನಮ್ಮ ನಿತ್ಯಜೀವನದಲ್ಲಿ ಪ್ರಣಯವು ಹೇಗೆ ವಿಕಾಸವಾಗುತ್ತದೆಂಬ ರೀತಿಯನ್ನು ಕವನ ಮೂಲಕ ತೋರಿಸಿರುವ ಕೀರ್ತಿ ನಮ್ಮ ಆಧುನಿಕ ಕವಿಗಳಿಗೆ ಸೇರಿದ್ದು. ಪ್ರಾಚೀನ ಕಾವ್ಯಗಳಲ್ಲಿ ಶೃಂಗಾರ ನಿರೂಪಣೆಗೆ ಬರವೇನು ಇಲ್ಲ. ಆದರೆ ಅಲ್ಲಿ ಕೃತ್ರಿಮತೆ ಎದ್ದುಕಾಣುತ್ತದೆ. ಇತ್ತೀಚಿನ ಕವಿಗಳಲ್ಲಿ ತಮ್ಮ ಅಸ್ತಿತ್ವವನ್ನು ಪ್ರೇಮಕವನಗಳ ಮೂಲಕವೇ ಬಿಂಬಿಸುತ್ತಾರೆ ಎನ್ನುವಷ್ಟರಮಟ್ಟಿಗೆ ಪ್ರೇಮಕವನಗಳನ್ನು ರಚಿಸುತ್ತಾರಾದರೂ ಅವರ ಕವನಗಳಲ್ಲಿ ಆಧುನಿಕ ಕವಿಗಳಲ್ಲಿದ್ದಂತಹ ಗಟ್ಟಿತನವಾಗಲೀ, ಅವರಲ್ಲಿದ್ದ ಅನುಭವದ ಸಾರತೆಯಾಗಲೀ, ಪ್ರೇಮಾನುಭವವನ್ನು ಕಟ್ಟಿಕೊಡುವ ಮಾನಸಿಕ ಸಿದ್ಧತೆಯಾಗಲೀ, ಪ್ರೇರಣೆ, ಸ್ಫೂರ್ತಿಯಾಗಲೀ ಇಲ್ಲ. ಇದರಿಂದ ಇತ್ತೀಚಿನ ಕವಿಗಳ ಕವಿತೆಗಳು ಜನಮಾನಸದಲ್ಲಿ ಉಳಿಯದೇ ಅಳಿದು-ಹೋಗುತ್ತಿವೆ. ಶ್ರೀ ಅ.ನ.ಕೃ ಅವರು ಬಹು ಹಿಂದೆಯೇ ಬೇರೆ ಬೇರೆ ಕವಿಗಳು ರಚಿಸಿದಂತಹ ಪ್ರಣಯಗೀತೆಗಳನ್ನು ಸಂಗ್ರಹಿಸಿ 'ಪ್ರಣಯ ಗೀತೆಗಳು' ಎಂಬ ಸಂಕಲನವೊಂದನ್ನು ಪ್ರಕಟಿಸಿದರು. ಈ ದೃಷ್ಟಿಯಿಂದ ನೋಡಿದರೆ ತೀನಂಶ್ರೀಯವರ 'ಒಲುಮೆ' ಕವನ ಸಂಗ್ರಹವೂ ಬಹುಮುಖ್ಯವಾದುದೇ. ಈ ನಿಟ್ಟಿನಲ್ಲಿ ಕುವೆಂಪು, ಬೇಂದ್ರೆ, ಕೆ.ಎಸ್.ನರಸಿಂಹ ಸ್ವಾಮಿ, ಪು.ತಿ.ನರಸಿಂಹಚಾರ್, ವಿ.ಸೀತಾರಾಮಯ್ಯ, ಚೆನ್ನವೀರಕಣವಿ-ಯವರಂತಹ ಮಹನೀಯ ಕವಿಗಳು ನೂರಾರರು ಪ್ರಣಯಗೀತೆಗಳನ್ನು ರಚಿಸಿರುವುದನ್ನು ನೋಡಬಹುದು. ಇಂತಹ ಕಾವ್ಯಗಳು ನಮ್ಮ ಜೀವನದ ದಿಕ್ಕನ್ನೇ ಬದಲಿಸಬಲ್ಲ ಶಕ್ತಿಕಾವ್ಯಗಳಾಗಿವೆ. ಕವಿಯೊಬ್ಬ ತನ್ನ ಜೀವನದಲ್ಲಿ ಪಡೆಯುವ ಸುಖ-ಸಂಭ್ರಮದಿಂದಿಡಿದು ದುಃಖದುಮ್ಮಾನದವರೆಗೂ ಪ್ರತಿಯೊಂದು ಅನುಭವಗಳನ್ನು ಕಾವ್ಯಗಳ ಮೂಲಕ ಬಿಚ್ಚಿಡುವುದರಿಂದಲೇ ಅವರ ಬದುಕಿನ ವೈಪರೀತ್ಯಗಳು ನಮಗೆ ಅರಿವಾಗುವುದು. ಹಾಗಾಗಿ ಕವಿಯ ಜೀವನ ಕೇವಲ ಪ್ರಣಯಕ್ಕೆ ಮಾತ್ರ ಸೀಮಿತವಾಗದೇ ಸರಸ-ವಿರಸಗಳ ನಡುವಿನ ಸಮರಸದ ಜೀವನ ಕಾವ್ಯಗಳ ಮೂಲಕ ಹೊರಚೆಲ್ಲುವುದು.

ನಮ್ಮ ನಿತ್ಯಜೀವನದಲ್ಲಿ ಪ್ರಣಯ ವಿಕಾಸಗೊಳ್ಳುವ ಬಗೆಯನ್ನು ಅಧ್ಯಯನ ಮಾಡಲು ಇವೆಲ್ಲಾ ಸಾಕಷ್ಟು ಗ್ರಾಸ ಒದಗಿಸುತ್ತವೆ ಎಂಬುದೂ ಮಹತ್ವದ ಸಂಗತಿಯೇ ಆಗಿದೆ. ಒಟ್ಟಾರೆಯಾಗಿ ಈ ಪ್ರಣಯ ಪ್ರಪಂಚವನ್ನು ಸಂಕ್ಷಿಪ್ತವಾಗಿ ಪರಿಚಯಿಸುವುದೇ ನಮ್ಮ ಈ ಅಧ್ಯಯನದ ಉದ್ದೇಶ. ಪ್ರೇಮ ಅಮರವಾದದ್ದು, ಕಾಮ ಕ್ಷಣಿಕವಾದದ್ದು. ಪ್ರೇಮ ಭಕ್ತಿಯೂ ಹೌದು, ವಾತ್ಸಲ್ಯವೂ ಹೌದು. ಆದರೆ ಭೋಗ ಎನ್ನುವುದು ಕೇವಲ ಕಾಮಕ್ಕೆ ಮೀಸಲಿಟ್ಟ ಕ್ಷಣಿಕ ತೃಪ್ತಿಯಲ್ಲ. ಅದನ್ನು ಹೃದಯತುಂಬಿ ಯಾವುದೇ ಸ್ವಾರ್ಥವಿಲ್ಲದೇ ಮನಃಸ್ಫೂರ್ತಿಯಾಗಿ ಪಡೆಯುವಂತದ್ದು. ಇಂತಹ ನಿಶ್ಕಲ್ಮಶವಾದ ಪರಿಶುದ್ಧ ಬಯಕೆ ಸತಿ-ಪತಿ ದಾಂಪತ್ಯದಲ್ಲೇ ಹೆಚ್ಚು. ಶರಣಸತಿ ಲಿಂಗಪತಿ ಎಂಬ ನುಡಿಯಂತೆ, ಸತಿ ಗಂಡಿಗೆ ಶಕ್ತಿಯಾದರೆ, ಪತಿ ಹೆಣ್ಣಿಗೆ ಶಿವನಂತೆ. ಈ ಶಿವಶಕ್ತಿಗಳು ಒಂದುಗೂಡಿದಾಗ ಮಾತ್ರ ಪೂರ್ಣಫಲ ದೊರಕುತ್ತದೆ. ನಿಜ್ಕೂ ಭಾರತೀಯರ ದೃಷ್ಟಿಯಲ್ಲಿ ಇದು ಜೀವಂತವಾಗಿ ಉಳಿದಿರುವ ಸಂಸ್ಕೃತಿ. ಇಲ್ಲಿನ ದಾಂಪತ್ಯದಲ್ಲಿ ಪ್ರೀತಿ, ಪ್ರೇಮ, ತ್ಯಾಗ-ಭೋಗ ಇಷ್ಟ-ಕಷ್ಟ, ನೋವು-ನಲಿವು, ದುಃಖಿ-ದುಮ್ಮಾನ, ಸರಸ-ವಿರಸ ಎಲ್ಲವೂ ಕ್ರೋಢೀಕರಣಗೊಂಡಿದೆ.

ಪಾಶ್ಚಾತ್ಯ ಕವಿಯೊಬ್ಬ 'ಪ್ರೇಮವು ವಿವಾಹದೊಂದಿಗೆ ಸಾವನ್ನಪ್ಪುತ್ತದೆ' ಎಂದು ಹೇಳಿದ್ದಾನೆ. ಇದು ಅವರ ಸಂಸ್ಕೃತಿಯಲ್ಲಿ ಬಹುಮಟ್ಟಿಗೆ ನಿಜವಾಗಿದ್ದರೂ, ಆ ಸಂಸ್ಕೃತಿಯ ಪ್ರಭಾವದಿಂದ ನಮ್ಮಲ್ಲಿ ಸಮಾಜ ಸ್ವಲ್ಪಮಟ್ಟಿಗೆ ಬದಲಾವಣೆ ಕಂಡುಬರುತ್ತಿದ್ದರೂ ಪ್ರೇಮವು ಅಮರತ್ವವಾಗಿರಲೆಂದೇ ಈ ವೈವಾಹಿಕ ಸಂಬಂಧಗಳನ್ನು ಏರ್ಪಡಿಸುವುದು. ನಿಜ ಹೇಳಬೇಕೆಂದರೆ, ಪ್ರೇಮದ ಅನೇಕ ಮುಖಗಳು ವಿವಾಹದ ನಂತರ ತೆರೆಯಲ್ಪಡುತ್ತವೆ. ಕೇವಲ ಆಕರ್ಷಣೆಗೊಳಗಾಗಿ ಪ್ರೇಮಿಸುವ ಪ್ರಣಯಿಗಳಿಗೆ ವಿವಾಹದ ನಂತರ ನಿಜಪ್ರೀತಿಯ ದರ್ಶನವಾಗುತ್ತದೆ. ಇಂತಹ ಭಿನ್ನನೆಲೆಯಲ್ಲಿ ರಚಿತವಾದ ದಾಂಪತ್ಯಗೀತೆಗಳು, ಪ್ರಣಯ ಕವನಗಳು, ವಿರಹ ಕವನಗಳು ಎಲ್ಲವೂ ಈ ನಿಬಂಧದಲ್ಲಿ ವಿಶ್ಲೇಷಣೆಗೊಳಗಾಗಿವೆ.

ಈ ಪ್ರಬಂಧದಲ್ಲಿ ಮೊದಲನೇ ಅಧ್ಯಾಯ – ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿಯಾಗಿದ್ದು, ಈ ನಿಬಂಧದ ಉದ್ದೇಶ, ಸ್ವರೂಪ ಮತ್ತು ಅದರ ವ್ಯಾಪ್ತಿಯನ್ನು ಕುರಿತು ತಿಳಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ 'ಬೇಂದ್ರೆಯವರ ಜೀವನ ಮತ್ತು ವ್ಯಕ್ತಿತ್ವ'ದ ಬಗ್ಗೆ ಅಧ್ಯಯನ ಕೈಗೊಳ್ಳಲಾಗಿದೆ. ಬೇಂದ್ರೆಯವರ ಬದುಕಿನ ಹಲವಾರು ಘಟನೆಗಳು ಬೆಳೆದುಬಂದ ಬಗೆ ಸಾಹಿತ್ಯಕ್ಷೇತ್ರಕ್ಕೆ ಅವರು ಸಲ್ಲಿಸಿದ ಅಪಾರ ಸೇವೆಯನ್ನು ಚರ್ಚಿಸಲಾಗಿದೆ. ಹಾಗೆಯೇ ಅವರನ್ನು ಅರಸಿ ಬಂದ ಪ್ರಶಸ್ತಿಗಳು, ಅವರ ಜೀವನದಲ್ಲಿ ಮಹತ್ತರ ಪಾತ್ರವಹಿಸಿದ ವ್ಯಕ್ತಿಗಳ ಬಗ್ಗೆಯೂ ಚರ್ಚಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ 'ನವೋದಯ ಕವಿಗಳ ಕಾವ್ಯಗಳಲ್ಲಿ ದಾಂಪತ್ಯ ಚಿತ್ರಣ' ಹೇಗೆ ಮೂಡಿ ಬಂದಿದೆ ಎಂಬುದರ ಬಗ್ಗೆ ಅಧ್ಯಯನ ಕೈಗೊಳ್ಳಲಾಗಿದೆ. ಸಾಹಿತಿಗಳು, ಕವಿಗಳು ಎಂದಿಗೂ ವ್ಯಕ್ತಿ ಶೋಧದಲ್ಲಿ ನಿರತರಾದವರಲ್ಲ. ಸಮಷ್ಠಿ ಶೋಧ ಅವರ ಮೂಲ ಉದ್ದೇಶ. ಈ ನಿಟ್ಟಿನಲ್ಲಿ ನವೋದಯ ಕಾಲಘಟ್ಟದ ಕವಿಗಳ ಕಾವ್ಯಗಳಲ್ಲಿ ದಾಂಪತ್ಯಚಿತ್ರಣ ಹೇಗೆ ವಿಭಿನ್ನವಾಗಿ ಮೂಡಿಬಂದಿದೆ ಎಂಬುದನ್ನು ತಿಳಿಯಲು ಅಂದಿನ ಪ್ರಾತಿನಿಧಿಕ ಕವಿಗಳೆನಿಸಿದ ಶ್ರೀ ಪು.ತಿ.ನ, ಶ್ರೀ ಕುವೆಂಪು ಹಾಗೂ ಶ್ರೀ ಕೆ.ಎಸ್.ನರಸಿಂಹಸ್ವಾಮಿಯವರ ಕಾವ್ಯಗಳ ಬಗ್ಗೆ ಅಧ್ಯಯನ ಮಾಡಲಾಗಿದೆ.

'ಭಾಗವತ ಕವಿ' ಎನಿಸಿದ ಪು.ತಿ.ನರಸಿಂಹಾಚಾರ್‌ರವರು ತಮ್ಮದೇ ದಾಂಪತ್ಯದ ಪ್ರೇಮಕಾವ್ಯಗಳನ್ನು ನಮಗೆ ನೀಡಿದ್ದು ತುಂಬಾ ವಿರಳವಾದರೂ, ಪ್ರೇಮ ಕಾವ್ಯಗಳ ಹಾಗೂ ಅದರ ಹಿಂದಿನ ಸತ್ವವನ್ನು ಆಳವಾಗಿ ಬಲ್ಲವರು. ಅವುಗಳು ಅವರ 'ಹಣತೆ', 'ಗಣೇಶದರ್ಶನ' ಕವನ ಸಂಕಲನಗಳಲ್ಲಿ ಹಾಗೂ 'ಗೋಕುಲನಿರ್ಗಮನ', 'ಅಹಲ್ಯೆ'ಯಂತಹ ಗೀತನಾಟಕಗಳಲ್ಲಿ ತುಂಬಾ ಅರ್ಥಪೂರ್ಣವಾಗಿಯೂ, ಮನಮೋಹಕವಾಗಿಯೂ ಮೂಡಿಬಂದಿದೆ. ಹಾಗಾಗಿ ಈ ಅಧ್ಯಾಯದಲ್ಲಿ ಇವರ ದಾಂಪತ್ಯಪ್ರೇಮ, ಅನುರಾಗ ಗೀತೆಗಳ ಕೆಲವು ಆಯ್ದ ಪದ್ಯಗಳನ್ನು ವಿಂಗಡಿಸಿಕೊಂಡು ವಿಶ್ಲೇಷಿಸಲಾಗಿದೆ.

ನವೋದಯ ಕಾಲದ ಮಹತ್ವದ ಕವಿಯಾದ ಶ್ರೀ ಕುವೆಂಪು ಅವರು ಮಡಿಬಾಳ್ವೆಯ ರಸತಪಸ್ವಿ. ಪ್ರಣಯ ಕವಿತೆಗಳ ಪಟ್ಟಿಯಲ್ಲಿ ವಿಶೇಷ ಸ್ಥಾನ ಪಡೆಯುವ ಕುವೆಂಪು ಅವರ ಸ್ವಭಾವ ಆತ್ಮವಿಮರ್ಶಾತ್ಮಕವಾದದ್ದು. ಈ ವಿಚಾರದಲ್ಲಿ ಅವರ ನಿಲುವು ನಡವಳಿಕೆಗಳೇ ಬೇರೆ. ಸತಿಪತಿಯರ ದಿವ್ಯ ಸಂಬಂಧ ಕಾಮವಾಸನೆಯಿಂದ ಮುಕ್ತವಾದ ಪಾವನಪ್ರೇಮ, ಇದರ ವೈಶಿಷ್ಟ್ಯವನ್ನು ಕುವೆಂಪು ಅವರ ಮಾತಿನ, ಕವನಗಳ ಮೂಲಕವೇ ಗ್ರಹಿಸಬೇಕು. ಆಧುನಿಕ ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಪ್ರೇಮ, ಪ್ರಣಯ ಗೀತೆಗಳು ಬಹುಪಾಲು ಬಾಹ್ಯಸೌಂದರ್ಯದ ವರ್ಣನೆಗೆ ಸೀಮಿತಗೊಂಡಿದೆ. 'ಪ್ರೇಮಕ್ಕಾಗಿ ಪ್ರೇಮ' ಎಂಬ ಸಿದ್ಧಾಂತವನ್ನು ದೃಷ್ಟಿಯಲ್ಲಿಟ್ಟುಕೊಂಡು ಕುವೆಂಪುರವರು ಕೂಡ ಪ್ರೇಮಕಾವ್ಯಗಳನ್ನು ರಚಿಸಿದ್ದಾರೆ. ಅವು ಕೇವಲ ಯಾವುದೋ ನೆಲೆಯಲ್ಲಿ ನಿಂತ ಕವನಗಳಾಗದೇ ಸೌಂದರ್ಯ ತತ್ವವನ್ನೂ ಮೀರಿ ಔನ್ನತ್ಯದ ನೆಲೆಯತ್ತ ಸಾಗುತ್ತದೆ. ಸತಿಪತಿಯರ ಅದ್ವೈತ ಸಿದ್ಧಿಗೆ, ಆತ್ಮದರ್ಶನಕ್ಕೆ ನೆರವಾಗುವ ದಾಂಪತ್ಯದರ್ಶನದ ಮಹತ್ವವನ್ನು ಕುವೆಂಪು ಅವರ ಪ್ರೇಮಗೀತೆಗಳಲ್ಲಿ ಮಾತ್ರ ನೋಡಲು ಸಾಧ್ಯ. ಹಾಗಾಗಿ ಕುವೆಂಪುರವರ ವಿಚಾರಧಾರೆಗಳನ್ನು ಈ ಅಧ್ಯಯನದಲ್ಲಿ ಪ್ರಮುಖವಾಗಿ ವಿಶ್ಲೇಷಿಸಲಾಗಿದೆ.

'ಒಲವಿನ ಕವಿ', 'ಪ್ರೇಮಕವಿ' ಎಂದೇ ಹೆಸರು ಪಡೆದ ಕವಿ ಕೆ.ಎಸ್.ನರಸಿಂಹಸ್ವಾಮಿ-ಯವರು ಹೀಗೆ ಜನಮನದಲ್ಲಿ ಒಬ್ಬ ಶ್ರೇಷ್ಠ ಕವಿಯಾಗಿ ನೆಲೆಗೊಳ್ಳಲು ಇವರು ರಚಿಸಿದ ಪ್ರೇಮಕಾವ್ಯಗಳೇ ಬಹುಮುಖ್ಯವಾದವು. ಗಂಡು-ಹೆಣ್ಣಿನ ಸಂಬಂಧಗಳನ್ನು ಕುರಿತಾದ ತಮ್ಮ ಕವಿತೆಗಳನ್ನು ಕವಿ ದಾಂಪತ್ಯಗೀತೆಗಳು ಎಂದು ಕರೆಯುತ್ತಾರೆ. ಬಹುಜನ ಸಮ್ಮತದಿಂದ ಸಮಾಜ ಒಪ್ಪಿತವಾದ ಕೌಟುಂಬಿಕ ನೆಲೆಯೊಳಗೆ ಪ್ರೇಮ ಅರಳಬೇಕು, ಹಾಗಿದ್ದಾಗ ಮಾತ್ರ ಅದರ ಮೌಲ್ಯವು ಹೆಚ್ಚುತ್ತದೆ ಎನ್ನುವ ಕವಿಗಳು ಅದರಲ್ಲಿ ಅತೀವವಾದ ನಂಬಿಕೆ-ಯನ್ನಿಟ್ಟುಕೊಂಡಿದ್ದವರು. ಹಾಗಾಗಿ ಕೆ.ಎಸ್.ನರಸಿಂಹಸ್ವಾಮಿ ಯವರ 'ಮೈಸೂರುಮಲ್ಲಿಗೆ', 'ಉಂಗುರ', 'ಇರುವಂತಿಗೆ', ಮಲ್ಲಿಗೆಯ ಮಾಲೆ', ಕವನಸಂಕಲನಗಳ ಕೆಲವು ಆಯ್ದ ಕವನಗಳನ್ನು ಈ ನಿಟ್ಟಿನಲ್ಲಿ ಅಧ್ಯಯನ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಈ ನಿಬಂಧದ ಪ್ರಮುಖ ಘಟ್ಟವಾದ 'ಬೇಂದ್ರೆ ಅವರ ಕಾವ್ಯಗಳಲ್ಲಿ ದಾಂಪತ್ಯದ ಸ್ವರೂಪ' ಎಂಬ ವಿಷಯದ ಬಗ್ಗೆ ಅಧ್ಯಯನ ನಡೆಸಲಾಗಿದೆ. 'ಸಮರಸವೇ ಜೀವನ', 'ಒಲವೇ ನಮ್ಮ ಬದುಕು' ಎಂಬುದು ಅಂಬಿಕಾತನಯ ದತ್ತರ ಕಾವ್ಯಸೂತ್ರ, ಜೀವನಸೂತ್ರ, ಹಾಗಾಗಿ ಬೇಂದ್ರೆಯವರ ಪ್ರೇಮಕವನಗಳಲ್ಲಿ ಅವರ ಬಾಹ್ಯಜೀವನ, ಕಾವ್ಯಜೀವನ ಮತ್ತು ಭಕ್ತಿ ಜೀವನ ಅನುಭವಗಳೂ, ಅನುಭಾವಗಳೂ ಅನಿವಾರ್ಯವಾಗಿ ಹೆಣೆದುಕೊಳ್ಳುತ್ತವೆ. ಅಂಬಿಕಾತನಯದತ್ತರ ಸಖೀಗೀತ, ಕಾಮಕಸ್ತೂರಿ, ಕನ್ನಡ ಮೇಘಧೂತ, ಇವುಗಳಲ್ಲಿ ಪ್ರಣಯವೇ ಪ್ರಧಾನವಾಗಿವೆ. ಅವರ ನಾದಲೀಲೆ, ಗಂಗಾವತರಣ ಮತ್ತು ಇನ್ನುಳಿದ ಕೃತಿಗಳಲ್ಲೂ ಪ್ರಣಯ ಗೀತೆಗಳಿದ್ದು ಕೆಲವು ಆಯ್ದ ಕವನಗಳನ್ನು ಮಾತ್ರ ಇಲ್ಲಿ ವಿಶ್ಲೇಷಿಸಲಾಗಿದೆ. ಹಾಗೆಯೇ ಈ ಅಧ್ಯಾಯದಲ್ಲಿ ಬೇಂದೆಯವರ ಸಖೀಗೀತ, ಬೇಂದೆಯವರ ಪ್ರಣಯಕವನಗಳು ಹಾಗೂ ಬೇಂದ್ರೆಯವರ ವಿರಹಕವನಗಳು ಎಂಬ ಉಪವಿಭಾಗಗಳಿದ್ದು, ಇವುಗಳಲ್ಲಿ ಅವರ ಅನುರಾಗ ಗೀತೆಗಳು, ವಿರಹಗೀತೆಗಳು, ಕೌಟುಂಬಿಕ ಭಾವಗೀತೆಗಳನ್ನು ವಿಶ್ಲೇಷಣೆಗೊಳಪಡಿಸಲಾಗಿದೆ. ಹೀಗೆ ಮೂರು ಹಂತಗಳಲ್ಲಿ ವಿಂಗಡಿಸಿಕೊಂಡು ಚರ್ಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಬೇಂದ್ರೆ ಕಾವ್ಯದಲ್ಲಿನ ಭಾಷೆ, ತಂತ್ರ ಮತ್ತು ವೈಶಿಷ್ಟ್ಯತೆಯ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ. ಬೇಂದ್ರೆಯವರ ಕಾವ್ಯಗಳನ್ನು ಏಕಮುಖ ದೃಷಿಕೋನದಿಂದ ಅರ್ಥೈಸಹೊರಡುವುದು ವ್ಯರ್ಥ ಪ್ರಯತ್ನ, ಏಕೆಂದರೆ ಅವರ ಕಾವ್ಯಗಳು ಪ್ರೇಮ, ಪ್ರಣಯ, ವಿರಹ, ದಾಂಪತ್ಯ ಇವುಗಳ ಅನುಭಾವಕ್ಕೆ ಮಾತ್ರ ಮೀಸಲಾಗಿಲ್ಲ, ಅವರ ಕಾವ್ಯಗಳಲ್ಲಿ ಪ್ರಕೃತಿಗೂ ಅಷ್ಟೇ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಪ್ರಕೃತಿಯೊಡನೆ ಮಾನವನನ್ನು ಸಮೀಕರಿಸಿ ಬರೆಯುವ ಅವರ ಕಾವ್ಯ ಶೈಲಿ ವಿಭಿನ್ನವಾದುದು. ಶಿಷ್ಟ ಸಂಪ್ರದಾಯಸ್ಥ

ಮನೆತನದವರಾದರೂ ಜನಮನ್ನಣೆಯ ಭಾಷೆಯಾದ ಉತ್ತರ ಕರ್ನಾಟಕದ ಜನಪದ ಸೊಗಡಿನ ಭಾಷೆಯನ್ನು ಬಳಸಿ ಕಾವ್ಯವನ್ನು ರಚಿಸಿದ್ದು ಇವರ ವೈಶಿಷ್ಟ್ಯ. ತಮ್ಮ ಕವನಗಳು ಕಣ್ಮುಂದೆ ಕಟ್ಟಿ ನಿಲ್ಲುವಂತೆ, ಸಹೃದಯರನ್ನು ವಾಚನದ ಮೋಡಿಗೆ ಒಳಗಾಗುವಂತೆ ಮಾಡಿದ ಮಹಾಮಾಂತ್ರಿಕ. ಬೇಂದ್ರೆಯವರ ಕಾವ್ಯಗಳ ತಂತ್ರಗಾರಿಕೆ ನಿಜಕ್ಕೂ ಅರ್ಥಪೂರ್ಣವಾದುದು. ಅವರ ಕಾವ್ಯಗಳಲ್ಲಿ ಕಾಣಬರುವ ವಸ್ತು ವಿಷಯ, ಭಾಷೆಯ ವೈಶಿಷ್ಟ್ಯತೆ ಹಾಗೂ ನಿರೂಪಣೆಯ ತಂತ್ರಗಾರಿಕೆ ಬೆರಗುಗೊಳಿಸುವಂಥದ್ದು. ಹಾಗಾಗಿ ಈ ಅಧ್ಯಾಯದಲ್ಲಿ ಬೇಂದ್ರೆಯವರ ಕಾವ್ಯದಲ್ಲಿನ ಭಾಷೆ, ತಂತ್ರ ಮತ್ತು ವೈಶಿಷ್ಟ್ಯತೆಯನ್ನು ಅಧ್ಯಯನ ಮಾಡಲಾಗಿದೆ.

ಕೊನೆಯದಾಗಿ ಅಧ್ಯಾಯ ಆರರಲ್ಲಿ ಇದುವರೆಗಿನ ಅಧ್ಯಾಯಗಳಲ್ಲಿ ಒಟ್ಟಾರೆಯಾಗಿ ವ್ಯಕ್ತವಾದ ವಿಷಯವನ್ನು ಕುರಿತು ವಿವೇಚಿಸಲಾಗಿದೆ. ಸಮಕಾಲೀನ ಸಂದರ್ಭದಲ್ಲಿ ನಮ್ಮ ಆಯ್ಕೆಯ ಕವಿಗಳ ಅಭಿವ್ಯಕ್ತಿಯ ವೈವಿಧ್ಯತೆ, ತೌಲನಿಕ ದೃಷ್ಟಿಕೋನದಿಂದ ಅಧ್ಯಯನ ಮತ್ತು ಒಟ್ಟಾರೆಯಾಗಿ ಈ ಅಧ್ಯಯನದ ಪ್ರಸ್ತುತತೆ ಏನು? ಎಂಬುದರ ಬಗ್ಗೆ ವಿಶ್ಲೇಷಣೆಯನ್ನು ಕೈಗೊಳ್ಳಲಾಗಿದೆ. ಜೊತೆಗೆ ಬೇಂದ್ರೆಯವರು ಕವಿಯಾಗಿ ಅವರು ಪಡೆದ ದರ್ಶನ ಸಿದ್ಧಿಗಳ ಅಂತಿಮ ಫಲಶೃತಿಯನ್ನು ಕನ್ನಡ ಸಾಹಿತ್ಯದಲ್ಲಿ ಅವರು ಪಡೆದುಕೊಂಡ ಸ್ಥಾನಮಾನಗಳನ್ನು ಗುರುತಿಸಲಾಗಿದೆ. ಒಟ್ಟಿನಲ್ಲಿ ಬೇಂದ್ರೆಯವರಿಂದ ಕನ್ನಡ ಕಾವ್ಯಲೋಕಕ್ಕೆ ಸಂದ ಕೊಡುಗೆ, ದೊರೆತ ಹೊಸ ಆಯಾಮ ಮುಂತಾದ ವಿಷಯಗಳ ಬಗೆಗಿನ ಒಟ್ಟು ಅಭಿಪ್ರಾಯವನ್ನು ಕೊನೆಯ ಮಾತುಗಳಲ್ಲಿ ಮಂಡಿಸಲಾಗಿದೆ.

*****

# ಅಧ್ಯಾಯ – ೨
# ಬೇಂದ್ರೆಯವರ ಜೀವನ ಮತ್ತು ವ್ಯಕ್ತಿತ್ವ

'ಕನ್ನಡ ಕಾವ್ಯಲೋಕದ ಗಾರುಡಿಗ' ಎಂದೇ ಖ್ಯಾತರಾಗಿದ್ದ ದ.ರಾ.ಬೇಂದ್ರೆ ಅವರು ಕನ್ನಡ ಸಾಹಿತ್ಯ ಲೋಕ ಕಂಡ ಅಪರೂಪದ ಕವಿ. ಹೊಸಗನ್ನಡ ಸಾಹಿತ್ಯದ ಇತಿಹಾಸದಲ್ಲಿ 'ಅಂಬಿಕಾತನಯದತ್ತ' ಎಂಬ ಕಾವ್ಯನಾಮದಿಂದಲೇ ಪ್ರಸಿದ್ಧರಾಗಿರುವ ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರ ಹೆಸರು ಅಜರಾಮರವಾದುದು. ಅವರ ಜೀವನ, ಸಾಹಿತ್ಯ, ಸಾಧನೆ ಮುಂತಾದುವೆಲ್ಲ ಅನನ್ಯವಾಗಿರುವಂತಹುದು. ಕನ್ನಡ ನವೋದಯ ಕಾವ್ಯ ಪರಂಪರೆಗೆ ಬೇಂದ್ರೆಯವರ ಕೊಡುಗೆ ಅಪಾರವಾದುದು. ಸಾವಿರಾರು ಕವನಗಳನ್ನು ರಚಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ. ಪ್ರಧಾನವಾಗಿ ಅವರದು ಕವಿಹೃದಯ. ಭಾವಗೀತೆಗಳೇ ಅವರ ಸಾಹಿತ್ಯದ ಜೀವನಾಡಿ. ಕವಿತೆಗಳೇ ಅಲ್ಲದೆ, ನಾಟಕ, ಸಣ್ಣಕಥೆ, ವಿಮರ್ಶೆ, ಸಂಶೋಧನೆ, ಅನುವಾದ ಈ ಮೊದಲಾದ ಕ್ಷೇತ್ರಗಳಲ್ಲಿ ಅವರು ಸಾಕಷ್ಟು ಸಾಧನೆ ಮಾಡಿದ್ದಾರೆ.

ಬೇಂದ್ರೆಯವರು ಕನ್ನಡ ಸಾಹಿತ್ಯದ ನವೋದಯ ಕಾವ್ಯದ ಬೆಳವಣಿಗೆಯಲ್ಲಿ ವಹಿಸಿದ ಪಾತ್ರ ಮಹತ್ತರವಾದುದು. ಇವರು ತಮ್ಮ ಕಾವ್ಯಕ್ಕೆ ಕನ್ನಡದ ವಿವಿಧ ಪ್ರಭೇದಗಳನ್ನು ಉಪಯೋಗಿಸಿಕೊಂಡಿದ್ದರೂ, ಧಾರವಾಡದ ಸುತ್ತ ಪ್ರಚಾರದಲ್ಲಿದ್ದ ಕರ್ನಾಟಕದ ಜನಪದ ಉಪಭಾಷೆಯನ್ನು ಕಾವ್ಯದ ಮಾಧ್ಯಮಕ್ಕೆ ತಂದು ಶಿಷ್ಟಕಾವ್ಯಕ್ಕೆ ಒಂದು ಹೊಸ ತಿರುವನ್ನು ತಂದುಕೊಟ್ಟಿದ್ದು ಚಾರಿತ್ರಿಕವಾಗಿ ಬಹಳ ಮಹತ್ವದ್ದು. ಈ ಉಪಭಾಷೆಯಲ್ಲಿ ಬೇಂದ್ರೆಯವರು ಕವಿತೆಗಳನ್ನು ಬರೆದಿದ್ದರಿಂದ ಈಗಲೂ ಅವರು ನಮ್ಮ ಸ್ಮೃತಿಯಲ್ಲಿ ನೆಲೆ ನಿಂತಿದ್ದಾರೆ.

ವರಕವಿ ಬೇಂದ್ರೆ ಅವರು ಜನಿಸಿದ್ದು ಧಾರವಾಡದಲ್ಲಿ. ೧೮೯೬ ಜನವರಿ ೩೧ ರಂದು. ಇವರ ತಂದೆಯ ಹೆಸರು ರಾಮಚಂದ್ರ ಬೇಂದ್ರೆ, ತಾಯಿ ಅಂಬಾಬಾಯಿ. ಬಸವೇಶ್ವರರು ಜನ್ಮ ತಾಳಿದ ಮನ್ಮಥನಾಮ ಸಂವತ್ಸರದಲ್ಲಿಯೇ ಬೇಂದ್ರೆ ಅವರು ಜನಿಸಿದ್ದು. ಈ ಶುಭ ಸಂವತ್ಸರದ ಶ್ರೀ ಗುರು ದತ್ತಾತ್ರೇಯರ ಜನ್ಮದಿನವಾದ ಅಂದು ಮಗುವಿಗೆ 'ದತ್ತಾತ್ರೇಯ' ಎಂದು ನಾಮಕರಣವಾಯಿತು.

ತಮ್ಮ ಜನನವನ್ನು ಕುರಿತು 'ಅಂಬಿಕಾತನಯದತ್ತ' ಎಂಬ ಕವಿತೆಯಲ್ಲಿ ಹೀಗೆ ಹೇಳಿದ್ದಾರೆ.

"ಯಾವ ಯೋಗನಿದ್ರೆಯಲ್ಲಿ ಏನ ಕನಸ ಕಂಡೆನೋ
ಯಾವ ಹಾಲನುಂಡೆನೋ
ನಿನ್ನ ತನುವಿನಿಂದ ಬಂದ ನಿನ್ನ ತನಯದತ್ತನು
ನೀನು ಇತ್ತುದಿತ್ತನು!"

ಈ ರೀತಿ ಯೋಗ ಪುರುಷರಾಗಿ ಜನಿಸಿದ ಬೇಂದ್ರೆ ಅವರ ತಂದೆ ರಾಮಚಂದ್ರ ಬೇಂದ್ರೆ ಅವರು ಕನ್ನಡ ಶಾಲಾ ಮಾಸ್ತರರಾಗಿದ್ದರು. ಬಹಳ ಕಾಲ 'ಗಂಡಮಾಲೆ' ರೋಗದಿಂದ ಬಳಲಿ ಬದುಕಿನ ಕೊನೆಯನ್ನು ಕಂಡರು. ತಮ್ಮ ಹನ್ನೊಂದನೇ ವಯಸ್ಸಿಗೆ ತಂದೆಯನ್ನು ಕಳೆದುಕೊಂಡ ಬೇಂದ್ರೆ ಅವರು, ತಾಯಿಯ ಆಶ್ರಯದಲ್ಲೇ ಬೆಳೆಯಬೇಕಾಯಿತು. ಈ ತಾಯಿ ಹಾಗೂ ಮಗನಿಗೆ ಪೂರ್ಣ ಬೆಂಬಲವಾಗಿ ನಿಂತದ್ದು ಅಜ್ಜಿ ಗೋದುಬಾಯಿಯವರು. ಹೀಗೆ ತಾಯಿ ಅಂಬಾಬಾಯಿಯವರ ಆದರ್ಶ ಜೀವನ ಹಾಗೂ ಅಜ್ಜಿ ಗೋದುಬಾಯಿಯವರ ರಕ್ಷಣೆಯಲ್ಲಿ ಬೆಳೆದ ಬೇಂದ್ರೆಯವರು, ಮುಂದೆ ಕನ್ನಡ ಸಾರಸ್ವತ ಲೋಕದ ಮಿಂಚಿನ ಕುಡಿಯಾದರು.

ಬೇಂದ್ರೆಯವರ ಬಾಲ್ಯ ಧಾರವಾಡದಲ್ಲೇ ಕಳೆಯಿತು. ತಾಯಿ ಅಂಬಿಕೆಯ ಆದರ್ಶ ಮಾರ್ಗದರ್ಶನ ಬೇಂದ್ರೆಯವರ ಬಾಳದೀವಿಗೆಯಾದವು. ಚಿಕ್ಕವರಿರುವಾಗಲೇ ಹಲವಾರು ಹಾಡುಗಳನ್ನು ಗೀಚುವುದು ಅವರ ಹವ್ಯಾಸವಾಗಿತ್ತು. ಶಾಲೆಯಲ್ಲಿ ಶಿಕ್ಷಣ ಕಲಿಯುವಾಗ ಅವರಿಗೆ ಐದು ರೂಪಾಯಿ ವಿದ್ಯಾರ್ಥಿವೇತನ ದೊರೆಯುತ್ತಿತ್ತು. ಇದೇ ಅವರ ಶಿಕ್ಷಣದ ಮುನ್ನಡೆಗೆ ಸಹಾಯಕವಾಗಿತ್ತು. ಬಡತನದಲ್ಲೇ ಬೆಂದು ಬದುಕಿದ ಬೇಂದ್ರೆಯವರಲ್ಲಿ ಆತ್ಮಾಭಿಮಾನ ಮಹತ್ತರವಾಗಿತ್ತು. ಆದ್ದರಿಂದ, ಇವರು ಶಾಲೆಯಲ್ಲಿ ಪಡೆದ ಶಿಕ್ಷಣಕ್ಕಿಂತ ಬದುಕಿನಲ್ಲಿ ಪಡೆದ ಅನುಭವದ ಶಿಕ್ಷಣವೇ ಹೆಚ್ಚು. ಬೇಂದ್ರೆ ಕವಿಯಾಗಲೆಂದೇ ಹುಟ್ಟಿ ಬಂದವರು. ಅದಕ್ಕಾಗಿ ಬಡತನದ ಬಾಳಿನಲ್ಲೇ ಬೆಂದು ಬೆಳೆದರು. ಅಜ್ಜಿ ಗೋದುಬಾಯಿಯವರ ಕಟ್ಟುನಿಟ್ಟಿನ ಜೀವನ ಮಾರ್ಗದರ್ಶನದಿಂದ ಬೇಂದ್ರೆಯವರ ಬಡತನದ ಜೀವನಕ್ಕೆ ಹುರಿಕಟ್ಟಾದ ಆತ್ಮಾಭಿಮಾನ ಬೆಳೆಯುತ್ತ ಹೊರಟಿತ್ತು. ೧೯೧೩ರಲ್ಲಿ ಬೇಂದ್ರೆಯವರು ತಮ್ಮ ಮೆಟ್ರಿಕ್ ಪರೀಕ್ಷೆಯನ್ನು ಮುಗಿಸಿದರು. ತಮ್ಮ ಜೀವನಕ್ಕೆ ಹೊಸ ಆಯಾಮವನ್ನೇ ಕಟ್ಟಿಕೊಟ್ಟ ಅವರ ಅಜ್ಜಿ ಗೋದುಬಾಯಿಯವರು ಅಂದೇ ಕಾಲವಶವಾದರು. ಇಂತಹ ಸಮಯದಲ್ಲಿ ಅವರಿಗೆ ಅನಾಥಭಾವನೆ ಕಾಡಿದಾಗ ಅವರ ಚಿಕ್ಕಪ್ಪ ಬಂಡೋಪಂತ ಮುಂದೆ ಬಂದು ಅವರ ಮುಂದಿನ ಶಿಕ್ಷಣಕ್ಕೆ ಸಹಾಯ ಮಾಡಿದರು. ಕಾಲೇಜು ಶಿಕ್ಷಣಕ್ಕಾಗಿ ಪುಣೆಗೆ ಹೋದರು. ಕನ್ನಡ, ಸಂಸ್ಕೃತ, ಇಂಗ್ಲೀಷ್, ಮರಾಠಿ ಭಾಷೆಗಳ ಮೇಲೆ ಪ್ರಭುತ್ವವನ್ನು ಬೆಳೆಸಿಕೊಂಡು ಕೃತಿ ರಚನೆ ಮಾಡಲು ಪ್ರಯತ್ನಿಸಿದರು. ಬೇಂದ್ರೆಯವರ ಮೇಲೆ ಲಕ್ಷ್ಮೀಶ ಮತ್ತು ಸರ್ವಜ್ಞರ ಪ್ರಭಾವ ಬಹಳವಾಗಿತ್ತು. ೧೯೧೮ರಲ್ಲಿ ಬೇಂದ್ರೆಯವರು ಬಿ.ಎ. ಪರೀಕ್ಷೆಯಲ್ಲಿ ತೇರ್ಗಡೆಯಾದರು. ನಂತರ ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಅಧ್ಯಾಪಕ ವೃತ್ತಿಯನ್ನು ಹಿಡಿದರು.

೧೯೧೯ರಲ್ಲಿ ಬೇಂದ್ರೆಯವರು ಹುಬ್ಬಳ್ಳಿಯಲ್ಲಿ ಲಕ್ಷ್ಮೀಬಾಯಿಯವರೊಡನೆ ವಿವಾಹವಾದರು. ಕವಿಯಾಗಿ, ಶಿಕ್ಷಕರಾಗಿ, ಸರಸ ಸಹೃದಯ ಸನ್ಮಿತ್ರರಾಗಿ, ವಿದ್ಯಾರ್ಥಿಗಳ ಮೆಚ್ಚಿನ ಗುರುಗಳಾಗಿ ಲಕ್ಷ್ಮೀಬಾಯಿಯ ಪ್ರೇಮದ ಪತಿಯಾಗಿ ಬೇಂದ್ರೆ ಬೆಳೆದರು. ೧೯೨೪ರಲ್ಲಿ ಬೇಂದ್ರೆಯವರಿಗೆ ಮಾತೃವಿಯೋಗ ಆಯಿತು. ಆದರೆ, ಅವರ ಪತ್ನಿ ಲಕ್ಷ್ಮೀಬಾಯಿಯವರು ಒಂದರ್ಥದಲ್ಲಿ ತೆರವಾದ ಮಾತೃಸ್ಥಾನವನ್ನು ತುಂಬಿದರೆನ್ನಬಹುದು. ಲಕ್ಷ್ಮೀಬಾಯಿಯವರದು ಬೇಂದ್ರೆಯವರಂತೆ ಸರಳ ವ್ಯಕ್ತಿತ್ವ ಗಂಡ ದುಡಿದು ತಂದಿದುರಲ್ಲಿಯೇ ಸರಳ ಜೀವನ ನಡೆಸಿದವರು. ಎಂದೂ ಸಂಸಾರದ ಯಾವ ಭಾರವನ್ನು ಗಂಡನ ಮೇಲೇರದೆ ಇದ್ದುದರಲ್ಲಿಯೇ ತೃಪ್ತಿಪಟ್ಟವರು.

"ನಾನು ಬಡವಿ ಆತ ಬಡವ
ಒಲವೇ ನಮ್ಮ ಬದುಕು"

ಎಂಬ ಭಾವನೆ ಅವರಲ್ಲಿ ಮಿಡಿದದ್ದು ಈ ಸಂದರ್ಭದಲ್ಲಿಯೇ. ಬೇಂದ್ರೆಯವರು ಗೃಹಸ್ಥ ಜೀವನವನ್ನು ನಡೆಸುತ್ತ ಒಂಬತ್ತು ಮಕ್ಕಳನ್ನು ಪಡೆದರು. ಅದರಲ್ಲಿ ವಿಧಿ ತನ್ನ ಪಾಲೇ ಹೆಚ್ಚೆಂದು ಆರು ಮಕ್ಕಳನ್ನು ತನ್ನ ಮಡಿಲಿಗೆ ಸೇರಿಸಿಕೊಂಡು ಬಿಟ್ಟಿತು. ಬೇಂದ್ರೆಯವರಿಗೆ ಉಳಿದದ್ದು ಮೂರೇ ಮಕ್ಕಳು. ಬಡತನದ ನೋವಿನೊಂದಿಗೆ ಮಕ್ಕಳನ್ನು ಕಳೆದುಕೊಂಡ ನೋವು ಲಕ್ಷ್ಮೀಬಾಯಿಯವರನ್ನು ಕಿತ್ತು ತಿಂದರೂ, ಬೇಂದ್ರೆಯವರ ಬದುಕಿನಲ್ಲಿ ನಿಜವಾದ ಅರ್ಧಾಂಗಿಯಾದರು. ಬೇಂದ್ರೆಯವರು ಸಹ ಅರ್ಧನಾರೀಶ್ವರರಾಗಿ ಬದುಕಿದರು.

೧೯೨೬ರಲ್ಲಿ ಬೇಂದ್ರೆಯವರು ಧಾರವಾಡದಲ್ಲಿ ಗೆಳೆಯರ ಬಳಗವನ್ನು ಪ್ರಾರಂಭಿಸಿದರು. ಸಾಹಿತ್ಯ ರಚನೆ ಪುಸ್ತಕ ಪ್ರಕಟಣೆ ಜೊತೆಗೆ ಜಯಕರ್ನಾಟಕ ಪತ್ರಿಕೆ ನಡೆಸಿದರು. ಬೇಂದ್ರೆಯವರನ್ನು ಕನ್ನಡನಾಡಿನ ಜನತೆ ಬಲುಶೀಘ್ರವಾಗಿ ಗುರುತಿಸಿತು. ಬೇಂದ್ರೆಯವರು ೧೯೩೦ರಲ್ಲಿ ಮೈಸೂರು ಲೇಖಕರ ಗೋಷ್ಠಿಯ ಅಧ್ಯಕ್ಷರಾದರು. ಅಷ್ಟರಲ್ಲಾಗಲೇ ಅವರ ಪ್ರಥಮ ಕಾವ್ಯ ಸಂಕಲನ 'ಕೃಷ್ಣಕುಮಾರಿ' ಪ್ರಕಟವಾಗಿತ್ತು. ೧೯೩೨ರಲ್ಲಿ ಅವರ 'ಗರಿ' ಕವನ ಸಂಕಲನ ಪ್ರಕಟವಾಯಿತು. ಆಗಿನ್ನೂ ಸ್ವಾತಂತ್ರ್ಯ ಚಳುವಳಿಯ ಬಿಸಿ ಏರಿದ್ದ ಸಮಯ. ಬೇಂದ್ರೆಯವರ 'ಗರಿ' ಕವನ ಸಂಕಲನದಲ್ಲಿನ 'ನರಬಲಿ' ಎಂಬ ಕವನವು ಆಗಿನ ಬ್ರಿಟಿಷ್ ಸರ್ಕಾರದ ಕೋಪಕ್ಕೆ ಕಾರಣವಾಗಿ ದೇಶಪ್ರೇಮಿಯಾದ ಬೇಂದ್ರೆ ಅವರು ಕೆಲಕಾಲ ಸೆರೆಮನೆ ವಾಸವನ್ನೂ ಅನುಭವಿಸಬೇಕಾಯಿತು. ತಮ್ಮ ನೌಕರಿಯನ್ನು ಕಳೆದುಕೊಳ್ಳಬೇಕಾಯಿತು.

ಇಂತಹ ಸಮಯದಲ್ಲಿ ವಿಧಿಯಿಲ್ಲದೆ ಬೇಂದ್ರೆ ೧೯೩೩ರಲ್ಲಿ ಮತ್ತೆ ಪುಣೆಗೆ ಹೋಗಿ ೧೯೩೫ರಲ್ಲಿ ಎಂ.ಎ. ಪದವಿಯಲ್ಲಿ ತೇರ್ಗಡೆಯಾದರು. ಈ ಸಂದರ್ಭದಲ್ಲಿ ತಮ್ಮ

ಚಿಕ್ಕಪ್ಪನನ್ನೂ ಕಳೆದುಕೊಂಡು ಸಂಸಾರದ ಪೂರ್ಣಭಾರ ಹೊರಬೇಕಾಯಿತು. ದಿಕ್ಕು ತೋಚದಂತಾದಾಗ ಮಾಸ್ತಿಯವರು ತಮ್ಮ 'ಜೀವನ' ಪತ್ರಿಕೆಗೆ ಇವರನ್ನು ಸಂಪಾದಕರನ್ನಾಗಿ ಮಾಡಿದರು.

೧೯೧೪ರ ವೇಳೆಗೆ ಇವರಿಗೆ ಹಾಕಿದ್ದ ಬಂಧನದ ಆಜ್ಞೆ ದೂರವಾಯಿತು. ೧೯೪೩ರಲ್ಲಿ ಪುಣೆಯ ಕಾಮರ್ಸ್ ಕಾಲೇಜಿನಲ್ಲಿ ಮತ್ತೆ ಕನ್ನಡ ಅಧ್ಯಾಪಕರಾಗಿ ಕೆಲಸಕ್ಕೆ ಹೋದರು. ಅದೇ ವರ್ಷ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರೂ ಆದರು. ಕೊನೆಗೆ ೧೯೪೪ರಲ್ಲಿ ಸೊಲ್ಲಾಪುರದ ಡಿ.ಎ.ವಿ. ಕಾಲೇಜಿನಲ್ಲಿ ಪೂರ್ಣಾವಧಿ ಕನ್ನಡ ಪ್ರಾಧ್ಯಾಪಕರಾಗಿ ಸೇರಿದರು. ೧೯೫೦ರಲ್ಲಿ ನಿವೃತ್ತರಾದರು. ಈ ಸಮಯದೊಳಗೆ ಅವರ ಅನೇಕ ಕವನ ಸಂಕಲನಗಳು ಪ್ರಕಟವಾಗಿದ್ದವು. ಮತ್ತೆ ಧಾರವಾಡ, ಸಾಧನಕೇರಿ, 'ಶ್ರೀಮಾತು' ನೆಲೆ ಮುಂದೆ ಧಾರವಾಡದ ಆಕಾಶವಾಣಿ ಕೇಂದ್ರದಲ್ಲಿ ಸಾಹಿತ್ಯ ಸಲಹಾಗಾರರಾಗಿ ಕೆಲವು ವರ್ಷ ಸೇವೆ ಸಲ್ಲಿಸಿದ ಮೇಲೆ ಪೂರ್ತಿ ನಿವೃತ್ತಿ. ಅಧ್ಯಾತ್ಮ ಚಿಂತನೆ, ಸಂಖ್ಯಾಶಾಸ್ತ್ರ ಅನ್ವೇಷಣೆ, ಮನೆಮನೆಗೆ ಮೈತ್ರಿಯ ಸಂವಾದ-ಭೇಟಿಗಳು ಹೀಗೆ ಜೀವನ ಜಿಜ್ಞಾಸೆಯಲ್ಲೇ ಅವರ ದಿನ ಕಳೆದವು. ಅಧ್ಯಾತ್ಮದ ವಿಷಯದಲ್ಲೂ ಒಲವು ಬೆಳೆಸಿಕೊಂಡಿದ್ದ ಬೇಂದ್ರೆಯವರು ಅರವಿಂದರ ವಿಚಾರಗಳೆಲ್ಲಾ ಆಸಕ್ತಿ ತೋರಿ ಅರವಿಂದರ ಕೃತಿಗಳನ್ನು ಇಂಗ್ಲೀಷ್‌ನಿಂದ ಭಾಷಾಂತರ ಮಾಡಿಕೊಟ್ಟರು. ಜಾನಪದ ಧಾಟಿಯ ಅವರ ಎಷ್ಟೋ ಕವಿತೆಗಳನ್ನು ಗಾಯಕರು ಸುಶ್ರಾವ್ಯವಾಗಿ ಹಾಡಿದ್ದಾರೆ.

೧೯೭೪ರಲ್ಲಿ ಅವರ 'ನಾಕುತಂತಿ' ಕವನ ಸಂಕಲನಕ್ಕೆ ಜ್ಞಾನಪೀಠ ಪ್ರಶಸ್ತಿ ಸಂದಿತು. ಕರ್ನಾಟಕದ ಎಲ್ಲಾ ಕಡೆಗೆ ಅವರಿಗೆ ಅದ್ದೂರಿ ಸ್ವಾಗತ, ಸನ್ಮಾನಗಳು ನಡೆದವು. ಇದಕ್ಕೂ ಮೊದಲೇ ಬೇಂದ್ರೆ ಅವರನ್ನು ಅನೇಕ ಗೌರವ ಪ್ರಶಸ್ತಿಗಳು ಹುಡುಕಿಕೊಂಡು ಬಂದಿದ್ದವು.

೧೯೪೩ – ಶಿವಮೊಗ್ಗದಲ್ಲಿ ಜರುಗಿದ ೨೭ನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿ.

೧೯೫೯ – 'ಅರಳು-ಮರಳು' ಕವನ ಸಂಗ್ರಹಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.

೧೯೬೮ – ಪದ್ಮಶ್ರೀ ಪ್ರಶಸ್ತಿ, ಕರ್ನಾಟಕ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್.

೧೯೬೯ – ನವದೆಹಲಿಯ ಸಾಹಿತ್ಯ ಅಕಾಡೆಮಿಯ 'ಫೆಲೋ' ಗೌರವ.

ಹೀಗೆ ಅನೇಕ ಗೌರವ, ಪ್ರಶಸ್ತಿಗಳ ಸುರಿಮಳೆಯೇ ಬೇಂದ್ರೆಯವರ ಮೇಲೆ ಹರಿಯಿತು. ಇಂತಹ ದೇಶಪ್ರೇಮಿ, ಕವಿ, ದಾರ್ಶನಿಕರೂ ಆದ ಬೇಂದ್ರೆ ೨೬-೧೦-೧೯೮೧ರ ಮಧ್ಯಾಹ್ನ ೧.೧೪ಕ್ಕೆ ನರಕ ಚತುರ್ದಶಿಯಂದು ಮುಂಬಯಿಯ ಹರಿಕಿಶನ್‌ದಾಸ್ ಆಸ್ಪತ್ರೆಯಲ್ಲಿ ಇಹಲೋಕವನ್ನು ತ್ಯಜಿಸಿದರು.

# ಅಧ್ಯಾಯ – ೩

# ನವೋದಯ ಕವಿಗಳ ಕಾವ್ಯಗಳಲ್ಲಿ ದಾಂಪತ್ಯದ ಸ್ವರೂಪ

ಆಧುನಿಕ ಕನ್ನಡ ಸಾಹಿತ್ಯ ಘಟ್ಟಗಳಲ್ಲಿ ನವೋದಯ ಸಾಹಿತ್ಯವು ಪ್ರಮುಖವಾದುದು. ಇಂಗ್ಲಿಷ್ ಶಿಕ್ಷಣದಿಂದ ಒದಗಿದ ಆಂಗ್ಲ ಸಾಹಿತ್ಯದ ಸಂಪರ್ಕ ಕನ್ನಡದಲ್ಲಿ ಹೊಸ ನೀರು ಹರಿಯಲು ಸಾಧ್ಯವಾಯಿತು. ಜೊತೆಗೆ ಅವರು ಈ ದೇಶದಲ್ಲಿ ನೆಲೆಯೂರಿದ್ದರ ಪರಿಣಾಮವಾಗಿ ನಮ್ಮ ದೇಶದ ಜನತೆಯ ಜೀವನದಲ್ಲಿ ಬದಲಾವಣೆಯೂ ಸಹ ಆಯಿತು. ಪ್ರಾಚೀನ ಕನ್ನಡ ಸಾಹಿತ್ಯ ವಸ್ತು ನಿಷ್ಠವಾದದ್ದು. ಇಲ್ಲಿ 'ಗದ್ಯಂ ವದ್ಯಂ ಪದ್ಯಂ ಹೃದ್ಯಂ' ವ್ಯಕ್ತಿಯ ಭಾವನೆಗಳಿಗೆ ಪ್ರಾಧ್ಯಾನ್ಯತೆ ಇರಲಿಲ್ಲ. ರಾಮಾಯಣ, ಮಹಾಭಾರತಗಳಲ್ಲಿ ಸೂರ್ಯವಂಶ ಹಾಗೂ ಚಂದ್ರವಂಶದ ಮೇರೆಗಳನ್ನೇ ಮೆಚ್ಚಿಕೊಂಡಾಯಿತು. ಆದರೆ, ಮಧ್ಯಯುಗದ ವಚನ ಹಾಗೂ ಕೀರ್ತನ ಸಾಹಿತ್ಯದಲ್ಲಿ ಭಕ್ತಿ ಪ್ರೇಮ ಹಾಗೂ ಸಾಮಾಜಿಕ ವಿಚಾರಗಳು ಪ್ರವೇಶ ಪಡೆದವು.

೧೯೦೦ ರ ನಂತರ ೧೯೨೧ ರವರೆಗೆ ಸಂಸ್ಕೃತ ಗ್ರಂಥಗಳ ಅನುವಾದಗಳು ಕಾಣಿಸಿಕೊಂಡವು. 'ಇಂಗ್ಲಿಷ್ ಗೀತಗಳು' ಪ್ರಕಟವಾದ ನಂತರ ಹೊಸಗನ್ನಡದಲ್ಲಿ ಭಾವಗೀತೆಯ ಉಗಮವಾಯಿತು. ಇದೇ ಆಜು–ಬಾಜಿನಲ್ಲಿ ಕುವೆಂಪು, ಬೇಂದ್ರೆಯವರೂ ಭಾವಗೀತೆಗಳನ್ನು ರಚಿಸಿದರು. ಇಂಗ್ಲಿಷ್ ಸಾಹಿತ್ಯದ ಪ್ರೇರಣೆಯಿಂದ ಕನ್ನಡದಲ್ಲಿ ಭಾವಗೀತೆ ಹುಟ್ಟಿತು. ಮಹಾಕಾವ್ಯಗಳು ವಸ್ತುನಿಷ್ಠವಾದರೆ, ಕವನಗಳು ವ್ಯಕ್ತಿನಿಷ್ಠವಾಗಿದ್ದವು. ಶ್ರೀ ಸಾಮಾನ್ಯನ ವೈಯಕ್ತಿಕವಾದ ಕನಸು–ನನಸು, ಆಸೆ–ನಿರಾಸೆ, ಪ್ರೇಮ–ವಿರಹ, ಮಿಲನ, ಬೆರಗು, ಬೇಸರ ಎಲ್ಲಾ ಇಲ್ಲಿ ಸಾಹಿತ್ಯದ ವಸ್ತುವಾದವು. ಶ್ರೀ ಯವರ ಆಂಗ್ಲ ಗೀತೆಗಳ ಅನುವಾದವು ಕನ್ನಡದಲ್ಲಿ ಹೊಸ ಬಾಗಿಲನ್ನು ತೆರೆಯಿತು.

೧೯೨೬ರ ನಂತರ ಕನ್ನಡದಲ್ಲಿ ಬಹಳ ಮಟ್ಟಿಗೆ ಪ್ರಯೋಗಗಳಾದವು. ಬೇಂದ್ರೆ, ಕುವೆಂಪು ಮೊದಲಾದವರು 'ಒಲವೇ ನಮ್ಮ ಬದುಕು' ಎಂಬಂತೆ ಅನೇಕ ಕವನಗಳನ್ನು ರಚಿಸಿದರು. ಪ್ರಾಸ, ನಿಯಮಗಳನ್ನೂ ಕೈ ಬಿಡಲಾಯಿತು. ಇದರೊಡನೆ ಕಥನ ಕವನಗಳು ಹುಟ್ಟಿದವು. ಇಂಗ್ಲಿಷ್‌ನ ವರ್ಡ್ಸ್‌ವರ್ತ್ ಕೀಟ್ಸ್, ಬೈರನ್, ಶೆಲ್ಲಿ, ಷೇಕ್ಸ್‌ಪಿಯರ್ ಮುಂತಾದವರ ಪ್ರಭಾವದಿಂದ ಕವಿತೆಗಳು ಕನ್ನಡದಲ್ಲಿ ರಚನೆಯಾದವು. ಇದಕ್ಕೆ ಪ್ರಮುಖ ಕಾರಣಕರ್ತ–ರಾದವರು 'ನವೋದಯ ಯುಗ ಪ್ರವರ್ತಕ'ರೆನಿಸಿಕೊಂಡ ಬಿ.ಎಂ.ಶ್ರೀಯವರು. ಇವರ 'ಇಂಗ್ಲಿಷ್ ಗೀತಗಳು' ತಲೆದೋರುವುದಕ್ಕೆ ಮೊದಲೇ ಇಂಗ್ಲಿಷ್‌ನಿಂದ ಕನ್ನಡಕ್ಕೆ ಕವಿತೆಗಳನ್ನು ಅನುವಾದ ಮಾಡಿ ಆ ಮೂಲಕ ಹೊಸಗನ್ನಡ ಕವಿತೆಯನ್ನು ಹುಟ್ಟು ಹಾಕಿದವರು ಎಸ್.ಜಿ. ನರಸಿಂಹಚಾರ್ಯ, ಪಂಜೆ ಮಂಗೇಶರಾಯರು, ಪಟ್ಟಿಯಂಗಡಿ ನಾರಾಯಣರಾಯರು. ಹೀಗೆ

ಮುಂದೆ ನವೋದಯ ಸಾಹಿತ್ಯದಲ್ಲಿ ಅನೇಕ ಕವಿಗಳು ಕಾವ್ಯರಚನೆಯಲ್ಲೇ ಹೆಚ್ಚಾಗಿ ತಮ್ಮನ್ನು ತೊಡಗಿಸಿಕೊಂಡರು.

ಈ ಹೊಸ ಅಲೆಗೆ ಡಿ.ವಿ.ಜಿ, ದ.ರಾ.ಬೇಂದ್ರೆ, ಕುವೆಂಪು, ಮಾಸ್ತಿ, ಪು.ತಿ.ನ, ಗೋವಿಂದ ಪೈ, ಜಿ.ಪಿ. ರಾಜರತ್ನಂ, ಅಡಿಗರು, ಗೋಕಾಕರು, ಕೆ.ಎಸ್.ನ, ಶಿವರುದ್ರಪ್ಪ, ಕಣವಿ ಮುಂತಾದವರು ತಮ್ಮ ಅನುಭವಗಳನ್ನು ತೆರೆದು ಕಾವ್ಯಗಳನ್ನು ರಚಿಸಿದರು. ನವೋದಯ ಸಾಹಿತ್ಯ ಲಕ್ಷಣದ ಪ್ರಧಾನಧಾರೆಗಳಲ್ಲಿ ಒಂದಾದ ಪ್ರೇಮ, ಪ್ರೀತಿ, ದಾಂಪತ್ಯದ ವಿಷಯಗಳನ್ನು ಒಬ್ಬರಿಗಿಂತ ಒಬ್ಬರು ತೀರಾ ಭಿನ್ನವೆನ್ನುವಂತೆ ಚಿಂತಿಸಿ ಬರೆದಿರುವುದೂ ಉಂಟು. ಪ್ರೇಮದಂತಹ ವಸ್ತು ಸಾರ್ವಕಾಲಿಕ ವಿಷಯವಾದ್ದರಿಂದ ನವೋದಯದ ಸಂದರ್ಭದಲ್ಲಿ ಅದು ಮಹತ್ವವನ್ನು ಪಡೆದುಕೊಂಡಿತು.

ಪಾಶ್ಚಾತ್ಯ ರೊಮ್ಯಾಂಟಿಕ್ ಕವಿಗಳು ತಮ್ಮ ಜೀವನದಲ್ಲಿ ತಾವು ಅನುಭವಿಸಿದ ಪ್ರಣಯಾನುಭವವನ್ನು, ಪ್ರೇಮ ಪ್ರಸಂಗಗಳನ್ನು ತಮ್ಮ ಕವಿತೆಯಲ್ಲಿ ನಿರೂಪಿಸಿದ್ದುದು ಶ್ರೀ ಯವರಿಗೆ ಆಕರ್ಷಕವಾಗಿ ಕಂಡಿತು. ಇದರ ಫಲವಾಗಿ ದಾಂಪತ್ಯ ಹಾಗೂ ದಾಂಪತ್ಯಪೂರ್ವ ಪ್ರೇಮದ ಕವನಗಳನ್ನು ಕನ್ನಡಕ್ಕೆ ಅನುವಾದ ಮಾಡಲು ಸಹಾಯಕವಾದವು. ಆದರೆ, ಅನುವಾದವಾಗಿಯೂ ಅದು ಕನ್ನಡ ಕಾವ್ಯದ ಮೇಲೆ ಬೀರಿದ ಪ್ರಭಾವ ಅಪಾರವಾದುದು. ಇಂಗ್ಲಿಷ್ ಗೀತೆಗಳಲ್ಲಿ ಕಾಣಿಸಿಕೊಂಡ ಪ್ರೇಮಕವಿತೆಗಳ ಪ್ರಭಾವ ನಂತರದ ಕವಿಗಳ ಮೇಲೆ ಹೆಚ್ಚು ಪ್ರೇರೇಪಿಸಿದವು. ತೀ.ನಂ.ಶ್ರೀ ಯವರ 'ಒಲುಮೆ' ಸಂಗ್ರಹದಲ್ಲಿ ಈ ಅಂಶ ಗಮನಕ್ಕೆ ಬರುತ್ತದೆ. ಬಿ.ಎಂ.ಶ್ರೀ ಯವರ ಈ ಅನುವಾದಿತ ಕೃತಿಯಲ್ಲಿ ಬರುವ ಕವನಗಳಾದ 'ನನ್ನ ಪ್ರೇಮದ ಹುಡುಗಿ', 'ಪ್ರೇಮ ರಹಸ್ಯ', 'ಒಂದು ಮುತ್ತು', 'ಪ್ರೇಮದ ಸಂಕಟ' ಮೊದಲಾದವುಗಳನ್ನು ನೋಡಿದರೆ, ನವೋದಯ ಕವಿಗಳ ಕವಿತಾ ರಚನೆಯ ಭಾಷೆ, ವಸ್ತು, ಲಯಗಳ ಮೇಲೆ ಇಂಗ್ಲಿಷ್ ಗೀತೆಗಳ ಪ್ರಭಾವವನ್ನು ಗುರುತಿಸಲಿಕ್ಕೆ ಬರುತ್ತದೆ.

ಕೌಟುಂಬಿಕ ಬಾಳಿನಲ್ಲಿ ಬರುವ ಅನುಭವಗಳಿಂದ ಮಾಗಿದ ಕವಿಗಳ ನೋವು-ನಲಿವೆಲ್ಲವೂ ಹಾಡಾಗುತ್ತವೆ. "ಎಮ್ಮ ಮನೆಯಂಗಳದಿ ಬೆಳದೊಂದು ಹೂವನ್ನು ನಿಮ್ಮ ಮುಡಿಲೊಳಗಿಡಲು ತಂದಿರುವೆವು..... ಮನೆಯನು ತುಂಬಲೊಪ್ಪಿಸುವೆವೆ", ವಿ. ಸೀತಾರಾಮಯ್ಯನವರ ಈ ಕವನದಲ್ಲಿ ಇಂದಿಗೂ ಹತ್ತಾರು ಭಾವನೆಗಳನ್ನು ಉದ್ರೇಕಿಸುವ ಅಂಶವನ್ನು ಕಾಣಬಹುದು. ಮದುವೆಯಾಗಿ ದಾಂಪತ್ಯದ ಹೊಸಬಾಳಿನ ಹೊಸಿಲಲಿ ನಿಂತಿರುವ ಸಂದರ್ಭದಲ್ಲಿ ಹೆಣ್ಣನೊಪ್ಪಿಸುವಾಗ ಎಮ್ಮ ಮನೆ ಬೆಳಕನ್ನು ನಿಮ್ಮ ಮನೆ ಬೆಳಗಲು ಕಳುಹಿಸುವೆವು ಎಂಬುವುದರಲ್ಲಿ ಈಗಲೂ ವಿಶಾಲಾರ್ಥ ತುಂಬಿರುವುದನ್ನು ಕಾಣಬಹುದು. ಭಾರತದಂತಹ ದೇಶದಲ್ಲಿ ಕುಟುಂಬ ವ್ಯವಸ್ಥೆಯೇ ಪ್ರಧಾನವಾದುದು. ಆದ್ದರಿಂದಲೇ ಇಲ್ಲಿನ

ಸಮಾಜ ಗಟ್ಟಿಗೊಂಡಿರುವುದೆಲ್ಲ ಗಂಡು–ಹೆಣ್ಣಿನ ಸಂಬಂಧವನ್ನು ಕೇವಲ ಒಂದು ಒಪ್ಪಂದವಾಗಿಯೋ ಅಥವಾ ವ್ಯವಸ್ಥೆಯಾಗಿಯೋ ಸ್ವೀಕರಿಸುವುದು ಇಲ್ಲಿನ ಜನರಿಗೆ ಕಷ್ಟಸಾಧ್ಯ. 'ಕುಟುಂಬ' ಎನ್ನುವುದಕ್ಕೆ ಮೌಲ್ಯಯುತವಾದ ಅರ್ಥವಿರುವುದರಿಂದ ಗಂಡು–ಹೆಣ್ಣಿನ ಸಂಬಂಧವನ್ನು ಒಂದು ಒಪ್ಪಿತ ನೀತಿ, ನಿಯಮ, ಚಿಂತನೆಯ ಹಿನ್ನೆಲೆಯಲ್ಲಿ ನೋಡಬೇಕಾಗುತ್ತದೆ. ಇಂತಹ ಉನ್ನತವಾದ, ಆದರ್ಶಯುತವಾದ ಸಂಬಂಧವನ್ನು ಪರಸ್ಪರ ಗಟ್ಟಿಗೊಳಿಸುವ ನಿಟ್ಟಿನಲ್ಲಿ ಹಲವಾರು ಒಲವಿನ ಗೀತೆಗಳು ರಚನೆಯಾಗಿವೆ. ಈ ಗೀತೆಗಳಲ್ಲಿರುವ ನವಿರು ಭಾವನೆಗಳನ್ನು ಅಕ್ಷರ ರೂಪಕ್ಕಿಳಿಸಿ ಸಹೃದಯರನ್ನು ಗೆಲ್ಲುವಲ್ಲಿ ನಮ್ಮ ಆಧುನಿಕ ಕವಿಗಳು ಯಶಸ್ವಿಯಾದರು. ಈ ರೀತಿಯ ಪ್ರೇಮಗೀತೆಗಳನ್ನು ರಚಿಸುವಲ್ಲಿ ಜನಪ್ರಿಯತೆಯನ್ನು ಗಳಿಸಿದ ಕವಿವರ್ಯರು ಪ್ರೇಮದಂತಹ ವಸ್ತುವಿನೊಂದಿಗೆ ಅಧ್ಯಾತ್ಮಿಕತೆಯನ್ನು ಅವಿನಾಭಾವವಾಗಿ ಮೇಳೈಸಿ ಮತ್ತಷ್ಟು ಜನಮನ್ನಣೆ ಗಳಿಸಿದರು.

**ಪು.ತಿ.ನ, ಕುವೆಂಪು ಮತ್ತು ಕೆ.ಎಸ್.ನ. ಅವರ ಕಾವ್ಯಗಳಲ್ಲಿ ದಾಂಪತ್ಯದ ಚಿತ್ರಣ**

ನವೋದಯ ಸಾಹಿತ್ಯದ ಪ್ರಾತಿನಿಧಿಕ ಲೇಖಕರೆನಿಸಿಕೊಂಡ ಕುವೆಂಪು, ಬೇಂದ್ರೆ, ಮಾಸ್ತಿ, ಪು.ತಿ.ನ, ಕೆ.ಎಸ್.ನ, ಕಾರಂತ, ಕಣವಿಯರಂತಹ ಅಗ್ರಮಾನ್ಯ ಕವಿಗಳಲ್ಲಿ ಮುಖ್ಯವಾಗಿ ಶ್ರೀ ಪು.ತಿ.ನ, ಶ್ರೀ ಕುವೆಂಪು ಹಾಗೂ ಶ್ರೀ ಕೆ.ಎಸ್.ನ. ರವರ ಒಲವಿನ ಕಾವ್ಯಗಳನ್ನು ಇಲ್ಲಿ ಅಧ್ಯಯನಕ್ಕಾಗಿ ಕೈಗೆತ್ತಿಕೊಳ್ಳಲಾಗಿದೆ.

**ಪು.ತಿ.ನರಸಿಂಹಾಚಾರ್ ಅವರ ಕವನಗಳಲ್ಲಿನ ದಾಂಪತ್ಯ ಚಿತ್ರಣ**

ಆಧುನಿಕ ಕನ್ನಡ ಸಾಹಿತ್ಯದ ಅದರಲ್ಲೂ ನವೋದಯ ಕಾವ್ಯದ ಉನ್ನತ ಸಾಧಕರಲ್ಲಿ ಶ್ರೀ ಪು. ತಿ. ನರಸಿಂಹಚಾರ್ ಅವರು ಒಬ್ಬರು. ಕನ್ನಡ ಸಾಹಿತ್ಯದ ನವೋದಯ ಕಾಲದ ಕವಿತ್ರಯರಲ್ಲಿ ಒಬ್ಬರೆನಿಸಿರುವ ಇವರನ್ನು "ಕನ್ನಡ ಕಾವ್ಯಶ್ರೀಯ ವಯಿರಮುಡಿ"[೧] ಎಂತಲೇ ಪರಿಗಣಿಸಿದ್ದಾರೆ. ಮೂಲತಃ ಜಿಜ್ಞಾಸು ಕವಿಯಾದ ಪು.ತಿ.ನ ಅವರ ಬರವಣಿಗೆಯನ್ನು ಸಂಕ್ಷಿಪ್ತವಾಗಿ ಪರಿಚಯ ಮಾಡಿಕೊಡುವುದೂ ಸಹ ದೊಡ್ಡ ಸವಾಲು. ಅವರು ರಚಿಸಿರುವ ಸಾಹಿತ್ಯದ ಆಳ ಅಂತಹುದು. ಇವರ ಕೃತಿಗಳ ಹಿಂದಿನ ಪ್ರೇರಣೆಗಳಾದ ವೈಚಾರಿಕತೆ ಮತ್ತು ಭಾವ ನಿರ್ಭರತೆಗಳ ಸುಂದರ ಸಂಯೋಜನೆಯು ಇವರ ಉತ್ತಮ ಕಾವ್ಯದಲ್ಲಿ ಆಗುವ ಹಾಗೆ ಆ ಕಾಲದ ಬೇರೆ ಯಾವ ಕವಿಯಲ್ಲಿಯೂ ಆಗುವುದಿಲ್ಲ ಎಂದೆನಿಸುತ್ತದೆ.

ಪು.ತಿ.ನ ಎಂಬ ಮೂರು ಸಂಕೇತಾಕ್ಷರಗಳಿಂದಲೇ ಜನಮಾನಸದಲ್ಲಿ ಅಚ್ಚೊತ್ತಿರುವ ಇವರ ಪೂರ್ಣ ಹೆಸರು ಪುರೋಹಿತ ತಿರುನಾರಾಯಣ ಅಯ್ಯಂಗಾರ್. ಶ್ರೀ ವೈಷ್ಣವ ಧರ್ಮದ ತೀರ್ಥ ಕ್ಷೇತ್ರಗಳಲ್ಲಿ ಒಂದಾದ ಮಂಡ್ಯ ಜಿಲ್ಲೆಯ ಮೇಲುಕೋಟೆಯಲ್ಲಿ ಜನಿಸಿದ ಇವರು ವೈದಿಕ ಮನೆತನದವರು. ಶ್ರೀ ತಿರುನಾರಾಯಣ ಅಯ್ಯಂಗಾರ್ ಮತ್ತು ಗೋರೂರಿನ

ಶ್ರೀಮತಿ ರಂಗಮ್ಮ ನವರ ಸುಪುತ್ರರಾಗಿ ೧೯೦೫ ರಲ್ಲಿ ಜನಿಸಿದರು. ತಮಿಳುನಾಡಿನ ತಿರುವಳ್ಳೂರಿನಿಂದ ಮೇಲುಕೋಟೆಗೆ ಬಂದು ನೆಲೆಸಿದ್ದ ಇವರ ಪೂರ್ವಿಕರು ವೇದ, ಉಪನಿಷತ್ತು, ಆಗಮ, ತರ್ಕ, ಪುರಾಣ ಮುಂತಾದ ಹತ್ತು ಹಲವು ಜ್ಞಾನ ಶಾಖೆಗಳಲ್ಲಿ ಪಾಂಡಿತ್ಯ ಗಳಿಸಿದ್ದರು. ವಂಶ ಪಾರಂಪರ್ಯವಾಗಿ ಬಳುವಳಿಯಾಗಿ ಬಂದ ಈ ಜ್ಞಾನ ಸಂಪತ್ತನ್ನು ಅರಗಿಸಿಕೊಂಡಿದ್ದ ಪು.ತಿ.ನ. ಅವರು ಕನ್ನಡ ಸಾರಸ್ವತ ಲೋಕದಲ್ಲಿ 'ಭಾಗವತ ಕವಿ' ಎಂತಲೇ ಚಿರಪರಿಚಿತರು.

ಪು.ತಿ.ನ ಅವರ ಕಾವ್ಯ ಸೃಷ್ಟಿಯು ಕಾವ್ಯ, ನಾಟಕ, ಲಲಿತ ಪ್ರಬಂಧ, ಭಾವ ಪ್ರಬಂಧ, ಕಾವ್ಯಾರ್ಥ ಚಿಂತನೆ, ಅನುವಾದ ಮುಂತಾದ ಹಲವು ಪ್ರಕಾರಗಳಲ್ಲಿ ಹಂಚಿಕೊಂಡಿದೆ. ಆದರೆ, ಅವರ ಬರವಣಿಗೆಯ ಎಲ್ಲ ಬಗೆಗಳಲ್ಲೂ ಹರಡಿಕೊಂಡಿರುವುದು ಕವಿಯ ಮನಸ್ಸು ಮತ್ತು ದೃಷ್ಟಿಕೋನ.ಕ 'ಕಿರುಕಾಣಿಕೆ' ಮತ್ತು 'ತಳಿರು' ಎಂಬ ಕವನಗಳ ಮೂಲಕ ಸಾಹಿತ್ಯ ಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿದ ಪು.ತಿ.ನ ಅವರು ಮಾಸ್ತಿ, ಬಿ.ಎಂ.ಶ್ರೀ, ಡಿ.ವಿ.ಜಿ, ಹಿರಿಯಣ್ಣನವರಂತಹವರ ಮೆಚ್ಚುಗೆಗೆ ಪಾತ್ರರಾದರು. ಅವರ ಮೊಟ್ಟಮೊದಲ ಸಂಕಲನವಾದ 'ಹಣತೆ', ೧೯೩೩ ರಲ್ಲಿ ಮಾಸ್ತಿಯವರ ಮುನ್ನುಡಿಯೊಂದಿಗೆ ಪ್ರಕಟವಾಯಿತು. ನಂತರ, 'ಮಾಂದಳಿರು', 'ಶಾರದಾಯಾಮಿನಿ', 'ಗಣೇಶ ದರ್ಶನ', 'ರಸ ಸರಸ್ವತಿ', 'ಮಲೆದೇಗುಲ', 'ಹೃದಯ ವಿಹಾರಿ', 'ಇರುಳ ಮೆರುಗು', 'ಹಳೆಬೇರು ಹೊಸಚಿಗುರು' ಹೀಗೆ ಸಾಲು ಸಾಲು ಕೃತಿಗಳು ಪ್ರಕಟವಾದವು. ಪು.ತಿ.ನ. ಅವರು ಹೆಚ್ಚು ಪ್ರಖ್ಯಾತಿ ಪಡೆದಿದ್ದು ಕವನಗಳ ರೂಪದಲ್ಲೇ ಮೂಡಿ ಬಂದ ಅವರ ಗೀತ ನಾಟಕಗಳ ಮೂಲಕ. 'ಅಹಲ್ಯೆ' ಮತ್ತು 'ಗೋಕುಲ ನಿರ್ಗಮನ' ಗೀತ ನಾಟಕಗಳು ಅವರಿಗೆ ಹೆಚ್ಚು ಹೆಸರು ತಂದುಕೊಟ್ಟಂತಹ ಕೃತಿಗಳು.

ತಂದೆಯವರ ಧರ್ಮಶ್ರದ್ಧೆ, ತಾಯಿಯವರ ಸಹನೆ, ತಾಳ್ಮೆ, ಭಕ್ತಿಯನ್ನು ಮೈಗೂಡಿಸಿ–ಕೊಂಡಿದ್ದ ಪು.ತಿ.ನ ಅವರು ಧಾರ್ಮಿಕ ಸಂಸ್ಕಾರಗಳನ್ನೂ ಸಂಪ್ರದಾಯಶೀಲತೆಯನ್ನೂ ಪಡೆದರು. ಹಾಗೆಂದ ಮಾತ್ರಕ್ಕೆ ಅವರ ಮನಸ್ಸು ಅವುಗಳಿಂದ ಪಡೆದ ಮಡಿವಂತಿಕೆಯಲ್ಲಿ ಪಾಚಿಗಟ್ಟಿ ನಿಲ್ಲಲಿಲ್ಲ. ಭಾರತೀಯ ಸಂಪ್ರದಾಯಶೀಲತೆ, ಸಂಸ್ಕೃತಿಗಳ ಸಾಕಾರ ಸ್ವರೂಪವಾಗಿದ್ದರು. ೧೯೨೫ರಲ್ಲಿ ಪು.ತಿ.ನ ರವರು ಇನ್ನೂ ವಿದ್ಯಾರ್ಥಿಯಾಗಿದ್ದಾಗಲೇ ಅವರ ವಿವಾಹವೇರ್ಪಟ್ಟಿತು. ತಿರುಮಕೂಡಲು ನರಸೀಪುರ ತಾಲ್ಲೂಕಿನ ಹೆಮ್ಮಿಗೆ ಗ್ರಾಮದ ಶ್ರೀರಂಗಾಚಾರ್ಯ ಮತ್ತು ಶ್ರೀಮತಿ ಎಗ್ಗಮ್ಮನವರ ಪುತ್ರಿ 'ಶೇಷಮ್ಮ' ನವರು ಇವರ ಧರ್ಮಪತ್ನಿ. ಸುಸಂಸ್ಕೃತರಾದ ಶೇಷಮ್ಮನವರು ಮಹಾ ಮಮತಾಮಯಿ. ಇದ್ದುದರಲ್ಲೇ ತೃಪ್ತಿಪಡುವ ಇವರು ಎಂದೂ ನರಸಿಂಹಾಚಾರ್ಯರ ಮನಸ್ಸನ್ನು ನೋಯಿಸಿದವರಲ್ಲ. ನಮ್ಮ ಕವಿವರ್ಯರಿಗೆ ಇದ್ದದ್ದು ಅಂತಹ ದೊಡ್ಡ ಹುದ್ದೆಯೇನಲ್ಲ. ಇದರ ಜೊತೆಗೆ ಬಡತನಕ್ಕೆ ಮಕ್ಕಳು ಜಾಸ್ತಿ

ಎನ್ನುವಂತೆ, ಏಳು ಜನ ಹೆಣ್ಣು ಮಕ್ಕಳು ಮತ್ತು ಒಬ್ಬ ಮಗನನ್ನು ಪಡೆದು ಶೇಷಮ್ಮನವರು ಸುಮಾರು ಅರವತ್ತು ವರ್ಷಗಳ ತುಂಬು ಕೌಟುಂಬಿಕ ಜೀವನವನ್ನು ನಡೆಸಿದವರು. ತಮ್ಮ ಕಲ್ಪನಾ ಜಗತ್ತಿನಲ್ಲೇ ವಾಸಿಸಿದ ಇವರಿಗೆ ಲೌಕಿಕ ಜ್ಞಾನವೂ ಕಡಿಮೆ. ಇಂತಹ ಶೇಷಮ್ಮನವರು ತಮ್ಮ ಎಲ್ಲಾ ಹೆಣ್ಣು ಮಕ್ಕಳ ಮದುವೆ, ಬಾಣಂತನವನ್ನು ಮಾಡಿ, ಮನೆಗೆ ಬಂದ ನೂರಾರು ಅತಿಥಿಗಳ ಸೇವೆಯಲ್ಲೇ ತಮ್ಮ ಜೀವನ ತುಂಬಿದರು. ಹೀಗೆ ಶ್ರುತಿ ತಪ್ಪದಂತೆ, ಪತಿಗಾಗಲೀ, ಬಂದವರಿಗಾಗಲೀ, ಮಕ್ಕಳು, ಅಳಿಯಂದಿರು, ಮೊಮ್ಮಕ್ಕಳಿಗಾಗಲೀ ಚೂರೂ ಬೇಸರ-ವಾಗದಂತೆ ಸಂಸಾರವನ್ನು ತೂಗಿಸಿಕೊಂಡು ಹೋಗುತ್ತಾ, ಗಂಡನನ್ನು ತಮ್ಮ ಕಲ್ಪನಾ ಜಗತ್ತಿನಲ್ಲಿ, ಅದನ್ನು ಬರವಣಿಗೆಗೆ ಇಳಿಸುವ ಕಾಯಕದಲ್ಲಿ ನಿಶ್ಚಿಂತರಾಗಿ ಇರಲು ಬಿಟ್ಟ ಉದಾತ್ತ ಚೇತನ. ಅದರಂತೆ, ಕವಿತ್ರಯರು ಸಹ ಕೆಳ ಮಧ್ಯಮ ವರ್ಗದಿಂದ ಉನ್ನತ ಮಧ್ಯಮ ವರ್ಗದವರೆಗೆ ಬುದ್ಧಿಶಕ್ತಿಯ ನೆರವಿನಿಂದಲೇ ಚಲಿಸಿದ ಅವರ ಜೀವನ ಕ್ರಮ ಅತೀತವಾದುದು.

ಮೈಸೂರು ಸರ್ಕಾರದ ಸಕ್ರೆಟರಿಯೇಟ್‌ನಲ್ಲಿ ಪ್ರಥಮ ದರ್ಜೆ ಗುಮಾಸ್ತರಾಗಿ ತಿಂಗಳಿಗೆ ಕೇವಲ ೩೫ ರೂ.ಗಳ ಸಂಬಳದ ಕೆಲಸಕ್ಕೆ ಸೇರಿದ ಕವಿಗಳಿಗೆ ನಿವೃತ್ತರಾಗುವ ವೇಳೆಗೆ ೪೭೫ ರೂಗಳು ಸಂಬಳ ಬರುತ್ತಿತ್ತು. ಇವರ ಈ ದುಡಿಮೆಯಲ್ಲೇ ತನ್ನ ತುಂಬು ಸಂಸಾರವನ್ನು ತೂಗಿಸಬೇಕಿತ್ತು. ಇಂತಹ ಒತ್ತಡದ ಜೀವನ ಕ್ರಮದಲ್ಲಿಯೇ ತೊಡಗಿಸಿಕೊಂಡಿದ್ದ ಸಾಹಿತ್ಯದ ಅಭಿರುಚಿಯನ್ನು ಅವರು ಎಂಸದೂ ಕೈ ಬಿಟ್ಟಿದ್ದಿಲ್ಲ. ಇಂತಹ ಕವಿವರ್ಯರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಬಹುಮಾನ ಹಾಗೂ ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಿ.ಲಿಟ್ ಪದವಿಗಳು ಸಂದವು. ಪು.ತಿ.ನ ಅವರು ಇಂಗ್ಲಿಷ್-ಕನ್ನಡ ನಿಘಂಟಿನ ಪರಿಷ್ಕರಣ ಯೋಜನೆಯಲ್ಲಿ ಸಂಪಾದಕರಾಗಿಯೂ ಕೆಲಸ ನಿರ್ವಹಿಸಿದ್ದರು. ಕನ್ನಡ, ಸಂಸ್ಕೃತದಲ್ಲಿ ಪರಿಣಿತಿ ಸಾಧಿಸಿದ್ದ ಇವರು ಇಂಗ್ಲಿಷ್ ಭಾಷೆಯಲ್ಲೂ ಉತ್ತಮ ಜ್ಞಾನವನ್ನು ಸಂಪಾದಿಸಿದ್ದರು. ಹೀಗೆ ಪು.ತಿ.ನ ಅವರ ಬಗೆಗೆ ಎಷ್ಟು ಹೇಳಿದರೂ ಪುಟಗಳು ಸಾಲದು. ಇಲ್ಲಿ ದಾಂಪತ್ಯದ ಚಿತ್ರ ನಮ್ಮ ಉದ್ದೇಶವಾಗಿರುವುದರಿಂದ ಅವರ ಕಾವ್ಯಗಳಲ್ಲಿ ಬರುವ ದಾಂಪತ್ಯ, ಪ್ರೇಮ-ಪ್ರಣಯದ ಕಲ್ಪನೆಯನ್ನು ಗಮನಿಸೋಣ.

ಪು.ತಿ.ನ ಅವರ ಸೃಜನಶೀಲತೆ ಅನೇಕ ಸಾಹಿತ್ಯ ಪ್ರಕಾರಗಳಲ್ಲಿ ಕ್ರಿಯಾಭಿಮುಖವಾಗಿ ಹರಿದು ಸಮೃದ್ಧವಾದ ಕೃತಿ ರಚನೆಗೆ ಕಾರಣವಾಗಿದೆ. ಅವರ ಯಶೋಗೋಪುರ ಭದ್ರವಾದ ಬುನಾದಿಯ ಮೇಲೆ ರೂಪುಗೊಂಡದ್ದು. ಸುಮಾರು ಮುನ್ನೂರಕ್ಕೂ ಹೆಚ್ಚು ಕವನಗಳನ್ನು ರಚಿಸಿರುವ ಇವರು ತಮ್ಮದೇ ಬದುಕಿನ ಪ್ರೇಮ, ಪ್ರಣಯ ಮುಂತಾದವನ್ನು ಕುರಿತು ಬರೆದಿರುವುದು ತೀರಾ ಕಡಿಮೆ. ಆದರೆ, ಪ್ರೇಮದ ಸ್ವರೂಪವನ್ನು ಅವರು ಸಂಪೂರ್ಣವಾಗಿ

ಅರಿತವರು. ಪ್ರೇಮದ ಮೂಲವನ್ನು ಗುರುತಿಸಿದವರು. ಅದರಿಂದುಂಟಾಗುವ ಒಳಿತು-ಕೆಡುಕುಗಳನ್ನು ಮನದಲ್ಲೇ ಲೆಕ್ಕಾಚಾರ ಹಾಕಿದವರು. ಪು.ತಿ.ನ ಅವರ ಮೊದಲ ಕವನ ಸಂಕಲನವಾದ 'ಹಣತೆ'ಯಲ್ಲಿ ಪ್ರೇಮದ ವಿವಿಧ ಮುಖಗಳನ್ನು ಚಿತ್ರಿಸುವ ಹಲವಾರು ಕವನಗಳು ಸೊಗಸಾಗಿ ಮೂಡಿಬಂದಿವೆ.

"ಒಲುಮೆಯೆನ್ನಲೆ? - ಬಾಳ ಬೆರಸುವ
ಬಯಕೆಯೆದೆಯೊಳು ತುಡಿಯಲಿಲ್ಲವು
ಮೋಹವೆನ್ನಲೆ? - ನಗೆಯು, ನೋಟವು
ಸುಳಿಸಲಿಲ್ಲವು ಮಿಂಚನು".

(ಹಣತೆ, ಹೆಣ್ಣೊಬ್ಬಳ ಕನಸು. ಪು. ೧೭)

ಕನಸಿನಲ್ಲಿ ಕಂಡು ಚೆಲುವಾದ ಹೆಣ್ಣು ಕಣ್ಣಿನ ಮುಂದೆಯೇ ಬಂದು ನಿಂತಾಗಿದೆ. ಆದರೆ, ಅವಳಲ್ಲಿ ಬಯಕೆ ಚಿಮ್ಮುವ ಯಾವ ಭಾವನೆಗಳೂ ಇಲ್ಲ. ಅವಳ ಮೇಲಿನ ಮೋಹ ಅವಳ ಬರಸೆಳೆದರೂ ಅವಳ ಮೊಗದಲ್ಲಿ ಯಾವ ನಗೆ ನೋಟವೂ ಸುಳಿದಿಲ್ಲ. ಕನಸಿನಲ್ಲಿ ಕಂಡ ಚೆಲುವೆ ಇವಳಾದರೂ, ದೊರೆಯನ್ನು ನೋಡಲು ನೆರೆದ ಮಂದಿಯ ನಡುವೆ ನನಸಾಗಿ ಕಂಡರೂ ಅವಳಲ್ಲಿ ಇವನ ಬಗ್ಗೆ ಮೋಹವೂ ಉದಿಸಲಿಲ್ಲ. ಪ್ರೇಮವೂ ಉದಿಸಲಿಲ್ಲ. ಇದು ಏಕಮುಖ ಪ್ರೇಮವಾಗಿ ಮೂಡಿದೆ. ಇದೇ ಸಂಕಲನದ 'ಬಯಕೆ-ಕೊಡಿಗೆ' ಕವಿತೆಯಲ್ಲಿ ವಿವಾಹದ ಸುಳಿಯಲ್ಲಿ ಸಿಲುಕಿ, ತಾನು ಆಸೆಪಟ್ಟ ಯಾವ ಅಂಶಗಳು ನೆರವೇರದೆ ಕೊನೆಗೆ ಸಾವನ್ನಪ್ಪುವ ಸ್ತ್ರೀಯೊಬ್ಬಳ ಚಿತ್ರಣವಿದೆ.

ಅದೇ ರೀತಿ ಅವರ ಪ್ರಸಿದ್ಧ ಕವನಗಳಲ್ಲೊಂದಾದ 'ಪ್ರತೀಕ್ಷೆ'ಯಲ್ಲಿ ಹೆಣ್ಣಿನ ಮನಸ್ಸೇ ಅವಳ ಗೆಳತಿಯಾಗಿ, ಪ್ರಶ್ನೆಯನ್ನು ಕೇಳುವ ಉತ್ತರವನ್ನು ಹುಡುಕುವ ರೀತಿಯಲ್ಲಿದೆ. ತನ್ನ ಪ್ರಿಯತಮನ ನಿರೀಕ್ಷೆಯಲ್ಲಿ ಕಾದಿರುವ ಪ್ರೇಯಸಿಯ ಮನದ ಭಾವಗಳು ಹೃದಯ ತುಂಬಿ ಬರುವುದನ್ನು ಸೊಗಸಾಗಿ ಚಿತ್ರಿಸಿದ್ದಾರೆ.

"ಇಂದು ಏನಾಗಿಹುದೆ ಗೆಳತಿ
ಏಕೆ ಸಡಗರಗೊಳ್ವೆನೆ?
ಕಡಲಿನಗಲದ ಕೇರಿ ಹರಿಹನು
ಹಾರಿ ಬರುವೆಲರಾರ ಯಾತನೆ
ಸುದ್ದಿ ಯಾವುದ ಹೇಳ್ವೆನೆ?"

(ಗಣೇಶ ದರ್ಶನ ಸಂಕಲನ, ಪ್ರತೀಕ್ಷೆ, ಪು. ೨೨೯)

ತನ್ನ ಮನಸ್ಸನ್ನು ಒಬ್ಬ ಗೆಳತಿಗೆ ಹೋಲಿಸಿ, ಆ 'ಮನಗೆಳತಿ'ಗೆ ಇಂದು ಏನಾಗಿದೆ? ಏಕೆ ಸಡಗರಗೊಳ್ಳುತ್ತಿದ್ದಾಳೆ? ಎಂಬುದನ್ನು ಆ ಗೆಳತಿ ಹೇಳಬೇಕು. ಇದು ಒಂದು ವಿಚಿತ್ರವಾದ ಪರಿಸ್ಥಿತಿ. ನಿಜಕ್ಕೂ ಅವಳ ಮನಸ್ಥಿತಿ ಹೇಗಿದೆ? ಎಂಬುದನ್ನು ಮುಂದಿನ ಸಾಲುಗಳಲ್ಲಿ ಗಮನಿಸಬಹುದು.

'ಕತ್ತಲಿದು ಮುನ್ನೀರಿನಂದದಿ
ತಿರೆಯ ಮುಳುಗಿಸಿ ಹಬ್ಬಿದೆ;
ಒಡೆದ ಹಡಗುಗಳಂತೆ ಮನೆಮಠ
ಅದರ ತಲದೊಳು ಬಿದ್ದಿದೆ – ಮನ
ಬೆದರಿ ಬಯಕೆಯ ತಬ್ಬಿದೆ'.

'ಕತ್ತಲಿದು ಮುನ್ನೀರಿನಂದದಿ' ಎನ್ನುವಲ್ಲಿ ಆಕೆ ಕತ್ತಲಲ್ಲಿ ತನ್ನ ಎಲ್ಲಾ ಇಂದ್ರಿಯಗಳನ್ನು ಕಿವಿಗೆ ಹೊಂದಿಸಿ, ತನ್ನ ಪ್ರಿಯತಮನ ಧ್ವನಿಯನ್ನೇ ನಿರೀಕ್ಷಿಸಿ ಆಕೆ ನಿಂತಿರುವುದು, ಅವನ ಆ ಬರುವಿಕೆ ಮುನ್ನೀರಿನಲ್ಲಿ ಅಂದವಾಗಿ ಬರುವ ತೆರೆಯಂತೆ ಹಬ್ಬಿದೆ. ಅಕೋ– ಎಂಬ ಒಂದು ಮಾತು ಒಂದು ತಿರುವನ್ನು ಕೊಡುತ್ತದೆ. 'ಆ ಕ್ಷಣದಲ್ಲಿ ಬಾನಿನವರೆಗೆ ಇಳೆಯ ನೆನಪನ್ನು ತರುವ ಗುಡಿಯ ಗಂಟೆಯ ಜನೆ, ನೂರಾರು ಕೊರಲುಗಳ ದನಿ ಎಲ್ಲಾ ಕೇಳುತ್ತವೆ. ಅಂದರೆ, ಅವಳಿಗೆ ತಳಮಳ 'ಹೃದಯದೇ ಕಾಂತವನು ಸಾರುವ ದನಿಯತಹುದೋ ಕಾಣೆನೆ, ಎಂಬಲ್ಲಿ ಇಷ್ಟೆಲ್ಲಾ ದನಿ ಕೇಳಿದರೂ ತನ್ನ ಪ್ರಿಯನ ದನಿ ಕೇಳಿಸಲಿಲ್ಲವಲ್ಲಾ ಎಂಬ ಕೊರಗಿದೆ. ಅಷ್ಟರಲ್ಲೇ ಅವನ ಸ್ನೇಹಿತನ ನಗೆನುಡಿ ಕೇಳಿ ಇವಳಿಗೆ ಬೇಕಾದವನು ತನ್ನ ಸ್ನೇಹಿತನನ್ನು ಬಿಟ್ಟು ಹೊರಟ ಎಂಬುದು ಅರಿವಾಗುತ್ತದೆ. ಆಗ ಅವಳ ಸಂಭ್ರಮ, ಸಂತೋಷ, ತವಕಕ್ಕೆ ಮಿತಿಯೇ ಇಲ್ಲ!

"ಒಳಪೊಗುವೆ, ಕನ್ನಡಿಯ ಮುಂಗಡೆ
ತುಸನಿಲುವೆ, ಹೊರಬರುವೆ, ಲಾಲಿಪೆ
ನೆದೆಯ ಹಾಸುವೆ ನಡೆವೆಡೆ" (ಪು. ೨೩೦)

ಪ್ರಿಯಕರ ಹತ್ತಿರ ಬರುವ ಶಬ್ದ ಕೇಳಿ ಅವಳಲ್ಲಿ ಉಂಟಾಗುವ ಉತ್ಸುಕತೆ ಇದು. ಹತ್ತಿರ ಬಂದ ಎನ್ನುವಾಗ, ಓಡುವುದು, ಕನ್ನಡಿಯ ಮುಂದೆ ಸ್ವಲ್ಪ ಹೊತ್ತು ನಿಲ್ಲುವುದು, ಹೊರಕ್ಕೆ ಬರುವುದು, ಅವನ ಹೆಜ್ಜೆ ದನಿಯನ್ನು ಆಲಿಸುವುದು, ಅವನು ನಡೆಯುವ ಕಡೆ ಇವಳ ಹೃದಯವನ್ನೇ ನಡೆಮುಡಿ ಮಾಡಿ ಹಾಸುವುದು. ಹೀಗೆ ಕ್ಷಣ ಕ್ಷಣವೂ ಅವಳಲ್ಲಿ ಮನಸ್ಸು ತವಕಿಸುತ್ತದೆ. ಬರುತ್ತಿದ್ದಾನೆ ಬಂದ ಇಷ್ಟರಲ್ಲೇ ಕಣ್ಣಿಗೆ ಬಿದ್ದ ಎನ್ನುವಾಗ ಅವಳಲ್ಲಿ ಭಯ, ಆತಂಕ ಮುಂದೇನು ಮಾಡುವುದೆಂಬ ಭೀತಿ ಎದುರಾಗುತ್ತದೆ. ಮನಸ್ಸು ಅವನ

ಸಾನಿಧ್ಯ ಬಯಸಿದರೂ ಅವಳಲ್ಲುಂಟಾಗುವ ಆ ಭೀತಿ ಹೆಣ್ಣಿನೊಳಗಡಗಿರುವ ಸಂಕೋಚ ಮನೋಭಾವವನ್ನು ತೋರುತ್ತದೆ.

'ಬಯಕೆ ಕೊಡೆವಿಡಿದೊಲುಮೆಯುತ್ಸವ
ನನ್ನನರಸಿಯೆ ಬಳಿಗೆ ಬಂದಿದೆ
ಕಾಣದೊಲು ಮರೆನಿಂದನೇ!'

ಈ ಕವನದ ಬಗೆಗೆ ಡಾ॥ ಎಚ್.ಎಸ್. ರಾಘವೇಂದ್ರರಾಯರು ಸಮರ್ಥವಾದ ವಿಶ್ಲೇಷಣೆಯನ್ನು ನೀಡಿದ್ದಾರೆ.

"ಇಲ್ಲಿನ ಚಿಕ್ಕ ಚಿಕ್ಕ ಅರ್ಥ ಘಟಕಗಳು ಅವಳ (ಈ ಕವನದ ಪ್ರೇಮಿಯ) ಭಾವ ವೈವಿಧ್ಯಕ್ಕೆ ಕನ್ನಡಿ ಹಿಡಿಯುತ್ತವೆ. ಅವನು (ಪ್ರಿಯ) ಯಕೆ ಕೊಡೆವಿಡಿದು ಬಂದಿರುವಾಗ ಕಾಣದೊಲು ಮರೆನಿಲ್ಲುವ ಶಾಲೀನತೆ ಸಾರ್ವಕಾಲಿಕವಾದುದನ್ನು ಮಾತುಗಳಲ್ಲಿ ಹಿಡಿದಿರುವ ಬಗೆ ಅಸಮಾನವಾದುದು. ಈ ಕವಿತೆಯು ಭಾವಗೀತಕಾರರಾಗಿ ಪು.ತಿ.ನ ಅವರಿಗಿದ್ದ ಸಾಧ್ಯತೆಗಳನ್ನು ತೋರಿಸುತ್ತದೆ. ನಂತರದ ತತ್ವಚಿಂತನೆಯ ಅತಿರೇಕವಿಲ್ಲದಿರುವುದೇ ಅದಕ್ಕೆ ಕಾರಣ. ಇಡೀ ಕವಿತೆಯಲ್ಲಿ ಕೇವಲ ಆರು ಸಂಸ್ಕೃತ ಪದಗಳಿವೆಯೆಂಬ ಸಂಗತಿ ಗಮನೀಯವಾದುದೆಂದು ತೋರುತ್ತದೆ. ನೀತಿ ತತ್ವ, ಸೌಂದರ್ಯಾನ್ವೇಷಣೆಗಳ ಹಂಗು ತೊರೆದು 'ಅರ್ಥಮುಕ್ತ' ಭಾವದಿಂದ ಧ್ವನಿ ಪ್ರಚುರ ಕವಿತೆಯನ್ನು ಕಟ್ಟಲು ಮನಸ್ಸು ಮಾಡಿದಾಗ ಪು.ತಿ.ನ ಯಾವ ಎತ್ತರಗಳನ್ನು ತಲುಪಬಲ್ಲರೆನ್ನುವುದಕ್ಕೆ ಈ ಕವಿತೆಯು ಸಾಕ್ಷಿ"[೨]

ಪು.ತಿ.ನ ಅವರ 'ಅವನು-ಅವಳು' ಕವನದಲ್ಲಿ ಪ್ರೇಮಿಗಳಿಬ್ಬರೂ ಉತ್ಸುಕತೆಯಿಂದ ಪ್ರೀತಿಸಿ, ಕೊನೆಗೆ ಬಡವರ ಮಗಳೆಂಬ ಕಾರಣಕ್ಕೆ, ತನ್ನ ಅಭಿಮಾನ ಕುಂದುವುದೆಂಬ ಭಯದಿಂದ ಸಿರಿವಂತರ ಮಗ ಅವಳನ್ನು ಮದುವೆಯಾಗುವ ಸಾಹಸ ಮಾಡದೇ ಆಕೆಯನ್ನು ಬಿಟ್ಟುಬಿಡುತ್ತಾನೆ.

"ತನ್ನವರೊಲ್ಲದ ಸರಸತಿ ನವವಧು
ಗಂಡನ ಮಡಿವಾಳಿತಿಯಾಗಿ
ಹಿಂಡು ಬಟ್ಟೆಗಳ ಹಿಂಡಲು ಬಂದಳು
ಜವ್ವನದುಲ್ಲಸದೊಳು ತೂಗಿ"

(ಅವನು-ಅವಳು, ಪು. ೨೩೧)

ಹೀಗಿರುವಾಗ ಆ ಬಡ ಹೆಣ್ಣು ಮತ್ತೊಬ್ಬ ಬಡವನ ಕೈಹಿಡಿದಳು. ಅವಳ ಗಂಡ ಇವಳನ್ನು ಉಪೇಕ್ಷೆ ಮಾಡಿದ. ಮನೆಯವರಿಗೆ ತಾತ್ಸಾರ, ಇಂತಹ ಸಮಯದಲ್ಲಿ 'ಕಲಾನಾದಿನಿ' ಕಾವೇರಿಯ ತೀರದಲ್ಲಿ ಆ ಪ್ರೇಮಿಗಳು ಸಂಧಿಸಿದರು. ಇವಳಿಗೆ 'ಅವನೇ'

ಎಂದು ನಿರ್ಲಕ್ಷ್ಯ, ಇವನಿಗೆ ಅವಳ ಬಡತನವನ್ನು ಕಂಡು ಮರುಕ. ಆ ಮರುಕವನ್ನು ಕಂಡು ಅವಳಿಗೆ ತಾತ್ಸಾರ. ಇಬ್ಬರಲ್ಲೂ ಬಿಂಕ, ಮೌನದಲ್ಲೇ ಮಾತುಕತೆ. 'ನನ್ನ ಅಪ್ಪನ ಹಣ ಅದಕ್ಕೂ ಮಿಗಿಲಾಗಿ ಅವನ ಅಭಿಮಾನ ಒಲವಿಗೆ ಅಡ್ಡಬಂತು' ಎಂಬುದು ಅವನ ಹಳಹಳಿಕೆ. ಅವಳಿಗೆ 'ನಿನ್ನವರ ಬಿಂಕಕ್ಕೆ ನನ್ನ ಒಲವನ್ನು ಸುಂಕವಾಗಿ ತೆರಬೇಕಾಗಿ ಬಂತಲ್ಲ" ಎಂಬುದು ಅವಳ ಉತ್ತರ. ಅವಳಲ್ಲೂ ಅಭಿಮಾನಕ್ಕೇನೂ ಕೊರತೆಯಿಲ್ಲ. ಇವರಲ್ಲಿ ಏನೇ ಆದರೂ ಅವಳ ದೃಢ ನಿರ್ಧಾರ ಮೆಚ್ಚತಕ್ಕದು.

"ನಿನ್ನ ರೂಪ ಸಿರಿ ಬಿಜ್ಜೆ ಬಿಗುಮಾನ
ನಿನಗೆಯೆ ಇರಲೀ ಪಿತೃಭಕ್ತಿ
ಇದೆ ಸಾಕಿದೆ ಸಾಕಿದೆ ಸಾಕೆನಗೀ
ಬಡವರ ನೆರವಿನೊಳೇ ಮುಕ್ತಿ" (ಪುಟ, ೨೩೨)

ಹೀಗೆ ಆತ್ಮವಿಶ್ವಾಸದಿಂದ ಸಿರಿತನಕ್ಕೆ, ಅವರ ಬಿಗುಮಾನಕ್ಕೆ ಸೆಡ್ಡುಹೊಡೆಯದೆ, ನನಗೆ ಸಿಕ್ಕಂತಹ ಬಡವರ ನೆರವಿನ ಮುಕ್ತಿಯೇ ಸಾಕು ಎಂದು ಮುನ್ನಡೆಯುತ್ತಾಳೆ. ಇಲ್ಲಿ ಪ್ರಿಯನ ಸನಿಹಕ್ಕಿಂತ ತನ್ನ ಬಾಳ್ವೆಯೇ ಹೆಚ್ಚೆಂದು ಮರಳುವ ಚಿತ್ರಣವಿದೆ. ಈ ಕವನದಲ್ಲಿ ತನ್ನ ದಾಂಪತ್ಯವೇ ಹೆಚ್ಚೆಂದು ಅರಿಯುವ ಸ್ತ್ರೀಯನ್ನು ನೋಡಿದರೆ, ಪು.ತಿ.ನ ಅವರ ಮತ್ತೊಂದು ಕವನವಾದ 'ಅವರು' ಕವಿತೆಯಲ್ಲಿ ಹಾದಿ ತಪ್ಪಿದ ಹೆಣ್ಣಿನ ಮನದ ವಿವಿಧ ಭಾವಗಳನ್ನು ಚಿತ್ರಿಸುತ್ತದೆ. ಇಲ್ಲಿ ಬರುವುದು ಒಂದು ವಿಚಿತ್ರವಾದ ಸಂಸಾರ. ನಾಯಕ-ನಾಯಕಿ ಅವರಿಬ್ಬರಿರುವ ಪುಟ್ಟ ಸಂಸಾರದಲ್ಲಿ ಪ್ರೀತಿಯ ಬೆಸುಗೆಯಂತಿರುವ ಒಂದು ಮಗು. ಇವರಿಬ್ಬರ ನಡುವೆ ಹೊಸಿಲ ಕುದುರೆಯನ್ನೇರಿ ಮಗು ಆಟವಾಡುತ್ತಿದೆ. ಆ ಮಗುವಿನ ಆಟದೊಳಗೆ ತಾನು ಮಗುವಾಗಿ ನಾಯಕನು ಸೇರಿ ಹೋಗಿದ್ದಾನೆ. ಈ ಮೂವರು ಕುಳಿತಾಗ ಯಾವನೋ ಒಬ್ಬ ಮನೆಯ ಮುಂದೆ ಹಾದು ಹೋಗುತ್ತಾನೆ. ಆ ವ್ಯಕ್ತಿಯನ್ನು ಕಂಡು ನಾಯಕಿ ತನಗರಿವಿಲ್ಲದಂತೆ ಅವನ ರೂಪಕ್ಕೆ ಮಾರುಹೋಗುತ್ತಾಳೆ.

ಹೀಗೆ ಅವರ ಮನೆಯ ಮುಂದೆ ಹೋದ ವ್ಯಕ್ತಿಯನ್ನು ಕವಿ ಹೋದವನು ಸುಮ್ಮನೆ ಹೋದನೆ? ಇಲ್ಲ,

"ಬಿಸಿಲ ಹೊಳಪನೊಳಗೆ ಚೆಲ್ಲಿ
ನೋಡದಿಂದ ಆಸೆ ಸರಳನವಳಿಗೆಸೆಯುತ
ನಡೆವನೊಬ್ಬ ಗುಡಿಯ ಕಡೆಗೆ
ಮನದ ಗೂಡ, ನೆನಪು ದುಂಬಿಯೇಳೆ ಕೆದಕುತ"

(ಹಣತೆ ಸಂಕಲನ, 'ಅವರು', ಪುಟ, ೨೩೩)

ಎಂದಿದ್ದಾರೆ. ಹೀಗೆ ಹಾದು ಹೋದ ವ್ಯಕ್ತಿಯನ್ನು ಕಂಡು ಸ್ವಭಾವತಃ ಸುಲಭ ಶೀಲಳಾದ ಅವಳ ನೆನಪಿನ ದುಂಬಿ ಏಳುತ್ತದೆ. ಎಲೆಗೆ ಕಡ್ಡಿ ಹಚ್ಚಿ ಮುರಿಯುವ ತಾಳಕ್ಕೆ ಹೊಂದಿಕೊಂಡು ಅವಳ ಭವದ ಭಾವನೆ ನಡೆಯುತ್ತದೆ. ಹತ್ತಿರದಲ್ಲಿರುವ, ಪತಿಯಾಗಲೀ, ಒಮ್ಮೆ ಒಲಿದಿದ್ದ ಪ್ರಿಯನಲ್ಲಾಗಲೀ, ಅವಳ ಮನಸ್ಸಿನ ಕಾಮನೆ ನೆಲೆಸಿಲ್ಲ. ಎಳೆಯನಲ್ಲಿ ಮಾತ್ರ ಅವಳ ಅರ್ಥಪ್ರೇಮ. ಹೀಗೆ ಚಂಚಲ ಸ್ವಭಾವದವಳಾದ ಮಡದಿ ತನ್ನ ಮನವನ್ನು ಎಲ್ಲಾ ಕಡೆ ಹರಿಬಿಡುತ್ತಿದ್ದರೂ ಅದನ್ನು ನಾಯಕ ತಿಳಿಯದಾದ. ಈ ಸಂಸಾರದ ವೈಚಿತ್ರ್ಯವೆಂದರೆ, ನಾಯಕಿಗೆ ನಾಯಕನಲ್ಲಿ ಒಲವಿಲ್ಲದಿದ್ದರೂ ಅವನಿಗೆ ಮಾತ್ರ ಇವಳೆಂದರೆ, ಪಂಚಪ್ರಾಣ. ಆದುದರಿಂದ ಇವರ ಜೀವನ ಶೃತಿಗೆಟ್ಟ ಸಂಗೀತವಾದಂತಿದೆ.

"ಮಂದ್ರದಲ್ಲಿ ಇವನ ಮಿಡಿತ
ತಾರದಲ್ಲಿ ಅವಳ ನುಡಿತ–ಶ್ರುತಿಯ ಸೇರದು
ಅವಳಾಸೆಯ ನೀತ ನೆಟುಕ
ಆಕೆಗಿವನೊಳಾಯ್ತು ಮರುಕ–ಭಾವವೇರದು" (ಪು. ೨೩೩)

ಇವರಿಬ್ಬರಿಗೂ ನಡುವೆ ಕೊಂಡಿಯಾಗಿ ಒಂದು ಮಗುವಿದ್ದರೂ ಆ ಮಗುವೂ ಅವನದಲ್ಲ. ಆದರೆ ಆತ ಮುಗ್ಧ, ಅಸೂಯೆಯಿಲ್ಲದವನು, ಇಲ್ಲ ಸಹನಶೀಲ ಸ್ನೇಹಪೂರ್ಣ ವ್ಯಕ್ತಿತ್ವ, ನೆರೆಹೊರೆಯವರು ಚುಚ್ಚು ಮಾತುಗಳಾಡುತ್ತಿದ್ದರೂ ಅರ್ಥಮಾಡಿಕೊಳ್ಳಲಾರ– ಪ್ರೇಮ ಕಿವುಡು ಅವನಿಗೆ. ಮಗುವನ್ನು ಕಂಡರೆ, ತುಂಬಾ ಪ್ರೀತಿ. ಒಟ್ಟಿನಲ್ಲಿ ಆತ ಶುದ್ಧ ಸತ್ವ ಪೂರಿತನಾದವನು.

"ಇಂಥ ಶುದ್ಧ ಸತ್ವದಿಂದ
ಆಕೆಗಾಯ್ತು ಅವಳೆ ನಾಚುವಂಥ ಬಾಳುವೆ
ಬಾಳ ದಡವ ಮೀರಿ ಹರಿದ
ಕಾಮದೆಡರ ದಾಟಲಾದನಿವನೆ ಸೇತುವೆ"

(ಅದೇ ಪುಟ)

ಇವನ ನಿಷ್ಕಲ್ಮಶವಾದ ಪ್ರೇಮವನ್ನು ಕಂಡು, ತಣ್ಣನೆಯ ಒಲುಮೆಯನ್ನು ಅರಿತು ನಾಯಕಿ ತನ್ನ ಹುಚ್ಚು ಆಸೆಗಳನ್ನೆಲ್ಲಾ ಬಿಟ್ಟು ತನ್ನ ಬಾಳಿನ ವಿಷವನ್ನು ಹೀರಿದ ಶಿವ ಇವನು ಎಂಬ ಭಾವವನ್ನು ತಳೆದು ಗಂಡನೊಡನೆ ಸೇರುತ್ತಾಳೆ. ಇಲ್ಲಿ ನಾಯಕಿ ಹುಚ್ಚು ಆಸೆಗಳಿಗೆ ಬಲಿಯಾರೂ ಗಂಡನಲ್ಲಿನ ಮುಗ್ಧ ಪ್ರೀತಿಗೆ ಮಣಿಯುವ ದಾಂಪತ್ಯ ಸುಖವೇ ಪರಮಸುಖವೆಂದು ಪತಿಯಲ್ಲಿಗೆ ಮರಳುವ ಸನ್ನಿವೇಶ ತುಂಬಾ ಅರ್ಥಗರ್ಭಿತವಾಗಿದೆ.

ಈ ರೀತಿ ದಾಂಪತ್ಯದಲ್ಲಿನ ಸಂತೋಷ, ಸಂಭ್ರಮವೇ ಪ್ರಮುಖವೆಂದು, ಹರಿಬಿಟ್ಟ ಮನಸ್ಸನ್ನು ತಡೆದು ವಾಪಸ್ಸಾಗುವ ವ್ಯಕ್ತಿತ್ವಗಳು ಪು.ತಿ.ನ ಅವರ ಕಾವ್ಯಗಳಲ್ಲಿ ಕಾಣುವಂತೆ ದಾಂಪತ್ಯ ಸುಖವನ್ನೇ ಕಾಣದ ಆದರೂ ಅದಕ್ಕೆ ಹಂಬಲಿಸುವ ವೇಶ್ಯೆಯರನ್ನು ಕುರಿತ ಕವನಗಳು ಮೂಡಿ ಬಂದಿವೆ.

'ಸಿರಿವಂತರ ಸೂಳೆಯರ ಹಾಡು' ಮತ್ತು 'ಬಡಸೂಳೆಗೆ ಅವಳ ಗೆಳತಿ' ಎಂಬ ಕವಿತೆಗಳು ಇವರ ಕಾವ್ಯ ಪ್ರೌಢಿಮೆಗೆ ಸಾಕ್ಷಿಯಾಗಿವೆ.

"ಬನ್ನಿರೇ ಸಖಿ, ಎನ್ನಿರೇ–ನಲವೊಂದೆಯೇ ಸಾರ
ನಮಗು ಮುದಕು ನೇರಾ
ಭವ ದೂರಾ" (ಹಣತೆ, ಸಿರಿವಂತರ ಸೂಳೆಯರ ಹಾಡು. ಪು.೨೩೭)

ಸಿರಿಯ ಉನ್ಮತ್ತತೆಯಿಂದ ಮೂಡಿ ಬಂದಿರುವ ಪದ್ಯದ ಈ ಸಾಲುಗಳು ಜನರ ಹೃದಯದ ನೋವು ಇವರ ಸಿರಿಗೆ ಅನ್ನ! ಅಂದರೆ, ಇವರನ್ನು ಎಲ್ಲರೂ ಖಂಡಿಸಿದರೂ, ಇವರಿಂದ ತಮ್ಮ ಸಂಸಾರ ಹಾಳಾಗಿ ನೋವನ್ನನುಭವಿಸುತ್ತಿರುವುದೇ ಜನರ ಹೃದಯದ ನೋವು. ಇವರ ಸಂಗಕ್ಕಾಗಿ ಬರುವ ಗಂಡುಗಳೇ ಇವರ ಸಿರಿಗೆ ಅನ್ನ ಎಂಬರ್ಥವಿದೆ. ಆದರೆ, ಇವರಿಗೆ ತಮ್ಮ ಹೊಟ್ಟೆಪಾಡೇ ಮುಖ್ಯವಾಗಿರುವುದರಿಂದ ಈ ಹಾದಿ ತುಳಿದಿದ್ದಾರೆ.

ಹೀಗೆ ಪು.ತಿ.ನ ಅವರ ಕವನಗಳಲ್ಲಿ ದಾಂಪತ್ಯದ ಹಲವಾರು ಮುಖಗಳು ತೆರೆದುಕೊಂಡಿರುವುದನ್ನು ಕಾಣಬಹುದು. ಪ್ರೀತಿ ಪ್ರೇಮಗಳ ಎಲ್ಲಾ ಎತ್ತರ, ಬಿತ್ತರಗಳೂ ಅವರ 'ಗೋಕುಲ ನಿರ್ಗಮನ'ದಲ್ಲಿ ಅದರ ವಿಕೃತ ಸ್ವರೂಪದ ಮಜಲುಗಳು 'ಅಹಲ್ಯೆ'ಯಲ್ಲಿ ರಾಗ ರಂಜಿತವಾಗಿ ವರ್ಣಿತವಾಗಿವೆ. ಹೀಗಾಗಿ ಅವರ ಬಿಡಿ ಕವನಗಳಲ್ಲಿ ವ್ಯಕ್ತವಾಗಿರುವ ಪ್ರೇಮದ ವಿವಿಧ ಮುಖಗಳು ಮಾತ್ರ ಇಲ್ಲಿ ತೆಗೆದುಕೊಳ್ಳಲಾಗಿದೆ. ಕವಿ ಪು.ತಿ.ನ ಅವರು ಕೇವಲ ಸೌಂದರ್ಯೋಪಾಸಕ ಮಾತ್ರವಲ್ಲ ತನ್ನ ಸುತ್ತಣ ಆಗುಹೋಗುಗಳಿಗೆ ತೀವ್ರವಾಗಿ ಪ್ರತಿಸ್ಪಂದಿಸುವ ಹೃದಯವೂ ಅವರಿಗುಂಟು ಎಂಬುದು ಈ ಕಾವ್ಯಗಳಿಂದ ವ್ಯಕ್ತವಾಗುತ್ತದೆ.

**ಕುವೆಂಪು ಅವರ ಕಾವ್ಯಗಳಲ್ಲಿನ ದಾಂಪತ್ಯ ಚಿತ್ರಣ**

ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ ಕುವೆಂಪು ಅವರ ಸಾಹಿತ್ಯದ ಬೆಳವಣಿಗೆ, ಸಾಧನೆ ಸಿದ್ಧಿಗಳಿಂದ ಅವರು ಇತರ ಕವಿಗಳ ಮೇಲೆ ಬೀರಿದ ಪ್ರಭಾವಗಳಿಂದ ಕಂಗೊಳಿಸುತ್ತಿದೆ. ಕಾವ್ಯ, ನಾಟಕ, ಸಣ್ಣಕತೆ, ಕಾದಂಬರಿ, ವಚನ, ಕವನ, ಮಹಾಕಾವ್ಯ, ಸಾಹಿತ್ಯ ವಿಮರ್ಶೆ ಈ ಒಂದೊಂದು ಪ್ರಕಾರದಲ್ಲೂ ಗಣನೀಯವಾದ ಕೊಡುಗೆಯನ್ನು ಕುವೆಂಪು ನೀಡಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯದ ಯಾವುದೇ ಪ್ರಕಾರವನ್ನು ಕುರಿತು

ಅಧ್ಯಯನ ನಡೆಸುವಾಗಲೂ ಕುವೆಂಪುರವರ ಕೃತಿಗಳನ್ನು ಹೊರತುಗೊಳಿಸಿದರೆ ಆ ಅಧ್ಯಯನ ಅಸಂಪೂರ್ಣ ಎನ್ನುವಷ್ಟರ ಮಟ್ಟಿಗೆ ಪ್ರತಿಯೊಂದು ವಿಭಾಗದಲ್ಲಿ ಗಟ್ಟಿಕೃತಿಗಳನ್ನು ಅವರು ರಚಿಸಿದ್ದಾರೆ. 'ಜಗದ ಕವಿ ಯುಗದ ಕವಿ' ಎಂದು ದ.ರಾ.ಬೇಂದ್ರೆಯವರಿಂದ ಹೊಗಳಿಸಿಕೊಂಡ ರಾಷ್ಟ್ರಕವಿ ಕುವೆಂಪುರವರು 'ಪ್ರಕೃತಿ ಕವಿ', 'ರಸಋಷಿ', 'ಕ್ರಾಂತಿಕಾರ', 'ಬಂಡಾಯಕಾರ' ಎಂದೂ ಹತ್ತು ಹಲವಾರು ಬಿರುದುಗಳನ್ನು ಪಡೆದವರು.

ಕನ್ನಡಕ್ಕೆ ರಾಷ್ಟ್ರಮಟ್ಟದ ಖ್ಯಾತಿಯನ್ನು ತಂದು ಕೊಟ್ಟ ಮೊದಲಿಗರಲ್ಲಿ ಒಬ್ಬರಾದ ಕುವೆಂಪುರವರು 'ಜ್ಞಾನಪೀಠ', 'ಪದ್ಮಭೂಷಣ', 'ಪದ್ಮವಿಭೂಷಣ', 'ಕರ್ನಾಟಕ ರತ್ನ' ಮೊದಲಾದ ಗೌರವ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ. ಕಾಲ ದೇಶ ಜನಾಂಗಗಳ ಎಲ್ಲೆಯನ್ನು ಮೀರಿದ ಈ ಕವಿ ಮನುಕುಲದ ಗುರುವೂ, ಕವಿಕುಲತಿಲಕರೂ ಆಗಿದ್ದಾರೆ.

ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ ಕವಿ ಕುವೆಂಪು ಅವರ ಪೂರ್ಣ ಹೆಸರು. ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ಬಳಿ ಇರುವ ಕುಪ್ಪಳ್ಳಿ ಇವರ ಊರು. ಆದರೆ, ಇವರು ಜನಿಸಿದ್ದು ತಾಯಿ ಸೀತಮ್ಮನವರ ತೌರು ಮನೆಯಾದ ಹಿರೇಕೊಡಿಗೆಯಲ್ಲಿ. ೧೯೦೪ರ ಡಿಸೆಂಬರ್ ೨೯ ರಂದು. ದಟ್ಟವಾದ ವನ್ಯಪ್ರದೇಶ, ಸುಂದರವಾದ ಮಲೆನಾಡು, ಪ್ರಕೃತಿ ಸೊಬಗಿನ ಸವಿಯನ್ನು ಹೀರಿ ಬೆಳೆದ ಕುವೆಂಪುರವರಿಗೆ ಚಿಕ್ಕಂದಿನಿಂದಲೇ ಸಾಹಿತ್ಯ ಸಂಸ್ಕಾರವೂ ದೊರಕಿತು. ಕಾವ್ಯಗಳ ಪಾರಾಯಣವೂ ಮನೆಯಲ್ಲಿ ನಡೆಯುತ್ತಿತ್ತು. ತಮ್ಮ ಪ್ರಾಥಮಿಕ ಶಾಲಾ ವಿದ್ಯಾಭ್ಯಾಸವನ್ನು ಹುಟ್ಟೂರಲ್ಲೇ ಪಡೆದರು. ಮಾಧ್ಯಮಿಕ ಶಾಲೆಗೆ ತೀರ್ಥಹಳ್ಳಿಗೆ ಬರಬೇಕಾಯಿತು. ನಂತರ ಹೈಸ್ಕೂಲ್ ವಿದ್ಯಾಭ್ಯಾಸವನ್ನು ಮೈಸೂರಿನ ಹಾರ್ಡ್ವಿಕ್ ಹೈಸ್ಕೂಲಿನಲ್ಲಿ ಮುಂದುವರೆಸಿದರು. ಈ ಸಮಯದಲ್ಲಿ ಸಿಕ್ಕಂತಹ ಬಿಡುವಿನ ವೇಳೆಯನ್ನು ವ್ಯರ್ಥ ಮಾಡದೇ ಷೆಲ್ಲಿ, ವರ್ಡ್ಸ್‌ವರ್ತ್, ಕೀಟ್ಸ್ ಮುಂತಾದ ಆಂಗ್ಲ ಕವಿಗಳ ಕವನಗಳನ್ನು ಸ್ವತಂತ್ರವಾಗಿ ಓದುವ ಶಕ್ತಿಯನ್ನು ಬಳಸಿಕೊಂಡರು. ಟಾಲ್‌ಸ್ಟಾಯ್‌ರವರ ಕಾದಂಬರಿಗಳು, ಪೌರ್ವಾತ್ಯ, ಪಾಶ್ಚಾತ್ಯ ತತ್ವಜ್ಞರ ಚಿಂತನಶೀಲ ಬರವಣಿಗೆಗಳು ಅವರ ಭಾವಬುದ್ಧಿಗಳಿಗೆ ಪುಷ್ಟಿ ನೀಡಿದವು. ತಮ್ಮ ಹದಿನೆಂಟರ ಹರೆಯದಲ್ಲಿ ೧೯೨೨ರಲ್ಲಿ ತಮ್ಮ ಇಂಗ್ಲಿಷ್ ಕವನಗಳ ಪುಟ್ಟ ಕವನ ಸಂಕಲನವೊಂದನ್ನು 'ಬಿಗಿನರ್ಸ್‌ಮ್ಯೂಸ್' ಎಂಬ ಹೆಸರಿನಲ್ಲಿ ಪ್ರಕಟಿಸಿದರು. ಇವರ ಕವನಗಳನ್ನು ಕಂಡು ಓದಿ ಮಿತ್ರರೂ, ಹಿರಿಯರೂ ಕವನಗಳ ಕಲಾಚಾತುರ್ಯಕ್ಕೆ, ವಸ್ತುವೈವಿಧ್ಯಕ್ಕೆ ಮಾರುಹೋದರು. ಆದರೆ, ಐರಿಷ್ ಕವಿ ಜೇಮ್ಸ್‌ಕಸಿನ್ಸ್ ಇದಕ್ಕೆ ಪ್ರೋತ್ಸಾಹಿಸದೆ 'ರವೀಂದ್ರರು ತಮ್ಮ ತಾಯ್ನುಡಿ ಬಂಗಾಳಿಯಲ್ಲಿ ಬರೆದಂತೆ ನೀನು ನಿನ್ನ ತಾಯಿ ಭಾಷೆಯಲ್ಲಿ ಬರೆ, ಉತ್ತಮ ಕವಿಯಾಗುತ್ತೀಯೆ' ಎಂದು ಬುದ್ಧಿ ಹೇಳಿ ಪ್ರೋತ್ಸಾಹಿಸಿದರು. ಅಲ್ಲಿಂದ ಕವಿಯ ಜೀವವಾಹಿನಿ ಇಂಗ್ಲಿಷ್‌ನಿಂದ ಕನ್ನಡದ ಕಡೆಗೆ ತಿರುಗಿ ಹರಿಯತೊಡಗಿತು.

ಆಧುನಿಕ ಕನ್ನಡ ಸಾಹಿತ್ಯದ ಅತ್ಯುಚ್ಚ ಸಿದ್ಧಿ-ಸಾಧನೆಗಳ ಪ್ರತೀಕವಾಗಿರುವ ಶ್ರೀ ಕುವೆಂಪುರವರು ೧೯೫೫ರಲ್ಲಿ ಮೊದಲ ಬಾರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನು ಕನ್ನಡಕ್ಕೆ ತಂದುಕೊಟ್ಟರು. "ಪೆಸರಾಸೆ! ಅದೊಂದು ನಾಗರಿಕತೆಗೆ ಮೀಸಲಾಗಿರ್ಪ ಮನೋಜಾಡ್ಯಂ ಕಣಾ" ಎಂದು ಘೋಷಿಸಿ ಕೀರ್ತಿಯನ್ನು 'ಶನಿ' ಎಂದೇ ಕರೆದು, ಅದನ್ನು ದೂರವಿರಿಸುವ ಮನೋಧರ್ಮವನ್ನು ಮೆರೆದರೂ, ನಾಡಿನ ಅತ್ಯುಚ್ಚ ಪ್ರಶಸ್ತಿಗಳಲ್ಲಿ ತಮ್ಮನ್ನು ಹರಸಿಕೊಂಡು ಬರವಂಥ ವಿಶಿಷ್ಟ ಕಾಣಿಕೆಗಳಿಂದ ಕನ್ನಡ ನಾಡು-ನುಡಿಗಳನ್ನು ಸಮೃದ್ಧವಾಗಿಸಿದವರು. ದೇಶೀಯ ಮಾತ್ರವಲ್ಲದೇ ವಿದೇಶೀಯ ವಿಶ್ವವಿದ್ಯಾನಿಲಗಳಿಂದಲೂ ಗೌರವ ಡಾಕ್ಟರೇಟ್ ಪದವಿಗಳನ್ನು ಪಡೆದು ಕನ್ನಡ ನಾಡಿನ ಹೆಮ್ಮೆಯ ಕವಿ ಎನಿಸಿಕೊಂಡರು. 'ಸರ್ವೋದಯ', 'ಸಮನ್ವಯ' ಮತ್ತು 'ಪೂರ್ಣದೃಷ್ಟಿ'ಗಳ ಪ್ರತೀಕವಾಗಿರುವಂಥ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯ, ಮಲೆನಾಡಿನ ಜನಜೀವನ ಮತ್ತು ಸಂಸ್ಕೃತಿಗಳ ಹಾಗೂ ಅವುಗಳ ಸ್ಥಿತ್ಯಂತರದ ಅದ್ಭುತ ಚಿತ್ರಣವನ್ನು ನೀಡುವ 'ಕಾನೂರು ಹೆಗ್ಗಡತಿ' ಹಾಗೂ 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳು ಇದರ ಜೊತೆಗೆ ಮಲೆನಾಡಿನ ಚಿತ್ರಗಳಂತಹ ಶಬ್ದಚಿತ್ರಗಳನ್ನು ಸಹೃದಯರಿಗೆ ದರ್ಶನ ಮಾಡಿಸಿದರು.

ಪೌರಾಣಿಕ ಎಳೆಯೊಂದಿಗೆ ಸಾಮಾಜಿಕ ಕಳಕಳಿಯನ್ನು ಮರೆಯುವ 'ಸ್ಮಶಾನ ಕುರುಕ್ಷೇತ್ರ', 'ಬೆರಳ್‌ಗೆ ಕೊರಳ್', 'ಶೂದ್ರ ತಪಸ್ವಿ', 'ಜಲಗಾರ', 'ಯಮನಸೂಲು' ಮೊದಲಾದ ನಾಟಕಗಳನ್ನು ಹಾಗೂ 'ನನ್ನ ದೇವರು ಮತ್ತು ಇತರ ಕಥೆಗಳು', ಸನ್ಯಾಸಿ ಮತ್ತು ಇತರ ಕಥೆಗಳು' ಎಂಬ ವಿಶಿಷ್ಟ ಕಥಾ ಸಾಹಿತ್ಯವನ್ನು ಕನ್ನಡ ಸಾಹಿತ್ಯಕ್ಕೆ ಬಳುವಳಿಯಾಗಿ ನೀಡಿದರು. ಸೃಜನಶೀಲ ಅನುವಾದ ಮತ್ತು ಅಳವಡಿಕೆಗಳ ಅತ್ಯುನ್ನತ ಆದರ್ಶಗಳನ್ನು ಮೆರೆದ 'ಬಿರುಗಾಳಿ' ಮತ್ತು 'ರಕ್ತಾಕ್ಷಿ'ಯಂತಹ ನಾಟಕಗಳು, 'ಚಿತ್ರಾಂಗದೆ'ಯಂಥ ಖಂಡಕಾವ್ಯ, 'ಬೊಮ್ಮನಹಳ್ಳಿ ಕಿಂದರಿ ಜೋಗಿ'ಯಂತಹ ನೀಳ್ಗವನ ಹೀಗೆ ಹತ್ತು ಹಲವಾರು ಕೃತಿಗಳು ಅವರ ಪ್ರೌಢಿಮೆ ಪ್ರತಿಭೆಗೆ ಸಾಕ್ಷಿಯಾಗಿವೆ. ರಾಮಕೃಷ್ಣ ಪರಮಹಂಸ ಮತ್ತು ಸ್ವಾಮಿ ವಿವೇಕಾನಂದರಂಥ ಜೀವನ ಚರಿತ್ರೆಗಳು ಮತ್ತು 'ನೆನಪಿನ ದೋಣಿ'ಯಂಥ ಆತ್ಮಕತೆ, ಇವುಗಳು ಕವಿ-ಕಾವ್ಯ ವಿವೇಚನೆಯ ಮಾನದಂಡಗಳಾಗಿವೆ. ವಿಮರ್ಶಾ ಸಾಹಿತ್ಯ, ಮಕ್ಕಳ ಸಾಹಿತ್ಯ, ಅಧ್ಯಾತ್ಮ ಕ್ಷೇತ್ರಗಳಲ್ಲಿನ ಕವಿಯ ಚಿಂತನಾಲಹರಿ ಸರಿಸಾಟಿ ವ್ಯಕ್ತಿ ಮತ್ತೊಬ್ಬರಿಲ್ಲ. ಹೀಗೆ ನೂರಾರು ಶ್ರೇಷ್ಟ ಕೃತಿಗಳನ್ನು ನೀಡಿದ ಕವಿ ಕುವೆಂಪುರವರು ಪ್ರಾಕೃತಿಕ ದರ್ಶನ ಚಿತ್ರಣವನ್ನು ನಮ್ಮ ಮುಂದಿಟ್ಟಿದ್ದಾರೆ. ದಾಂಪತ್ಯ ಗೀತೆಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿ ಅತ್ಯಮೂಲ್ಯವಾದ ಕೊಡುಗೆಯನ್ನು ನೀಡಿದ್ದಾರೆ. ಕೇವಲ ಕಾವ್ಯಗಳಲ್ಲೇ ಅಲ್ಲದೇ ಸಣ್ಣಕತೆ, ಕಾದಂಬರಿ, ಖಂಡಕಾವ್ಯ, ವಿಮರ್ಶೆ, ಮಹಾಕಾವ್ಯದಲ್ಲೂ ಅವರು ದಾಂಪತ್ಯದ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ.

'ಮದುವೆ' ಎಂಬುದು ಜೀವನದ ಮಹಾಘಟ್ಟಗಳಲ್ಲೊಂದು ಎಂದು ಗಾಢವಾಗಿ ನಂಬಿದ್ದ ಕುವೆಂಪುರವರು ಅವರ 'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ' ಎಂಬ ವಿಮರ್ಶಾ ಲೇಖನದಲ್ಲಿ ಅದೊಂದು ಸಂಭ್ರಮದ ಆಚರಣೆಯಾಗಬೇಕೇ ಹೊರತು ದುಂದುಗಾರಿಕೆ, ಮೂಢನಂಬಿಕೆಗಳಲ್ಲಿ ಮುಳುಗಬಾರದು ಎಂದಿದ್ದಾರೆ. ಜೊತೆಗೆ ಮದುವೆಗಳು ಗಂಡು-ಹೆಣ್ಣಿನ ಅನ್ಯೋನ್ಯ ಬದುಕಿಗೆ ಸಹಾಯವಾಗಬೇಕೇ ಹೊರತು, ಸಾಲದ ಹೊರೆಯನ್ನು ಹೊರಿಸಿ, ಸ್ವಚ್ಛಂದವಾಗಿ ಈಜಾಡುವ ಮೀನುಗಳನ್ನು ನೀರಿನಿಂದ ಹೊರತೆಗೆದು ಸಾಯುವಂತಾಗ-ಬಾರದು ಎನ್ನುತ್ತಾರೆ. ಇವರ ಈ ಮಾತುಗಳು ಅವರ ಮನೋವಿಕಾಸ ಹಾಗೂ ಸಂವೇದನೆಗೆ ಸಾಕ್ಷಿಯಾಗಿವೆ.

ಶ್ರೀಯುತರು ಗಂಡು-ಹೆಣ್ಣು ಸತಿ-ಪತಿಯರಾಗಿ ಕೂಡುವುದು ಜನ್ಮಾಂತರದ ಸುಕೃತ ಎಂದು ನಂಬಿದ್ದರು. ಅಲ್ಲದೇ ಅವರ ಕಲ್ಪನೆಯಲ್ಲಿ ಪ್ರೇಮ ದೈವಿಕವಾದುದು. ಪ್ರಣಯಗಳ ನೋವು-ನಲಿವಿನ ವರ್ಣನೆ ಅವರ ಕಾವ್ಯಗಳಲ್ಲಿ ಹೇಗೆ ಮೂಡಿ ಬಂದಿರುವುದೋ ಹಾಗೆ ನಿಜ ಜೀವನದಲ್ಲೂ ದಾಂಪತ್ಯ ಜೀವನದ ಸರ್ವಸುಖವನ್ನು ಅನುಭವಿಸಿದರು. ಸೀತಾರಾಮರಂತಹ ಒಲವಿನ ಆದರ್ಶ, ರಾಧಾಕೃಷ್ಣರಂತಹ ಮಧುರ ಭಾವ ಅವರ ಕಾವ್ಯಗಳಲ್ಲಿ ಮೂಡಿಬಂದಿವೆ. ಅವರ ಮೊಟ್ಟಮೊದಲನೆಯ ಕವನ ಸಂಗ್ರಹವಾದ 'ಕೊಳಲಿ'ನಲ್ಲಿಯೇ ಉತ್ತಮವಾದ ಅನೇಕ ಪ್ರಣಯ ಕಾವ್ಯಗಳನ್ನು ಕಾಣಬಹುದು. ಆ ತರುವಾಯ 'ನವಿಲು', 'ಪ್ರೇಮಕಾಶ್ಮೀರ', 'ಜೇನಾಗುವಾ', 'ಚಂದ್ರ ಮಂಚಕೆ ಬಾ ಚಕೋರಿ', 'ಅನುತ್ತರಾ' ಎಂಬ ಒಂದೊಂದು ಕವನ ಸಂಗ್ರಹವೂ ಕುವೆಂಪುರವರ ಪ್ರಣಯದ ದೃಷ್ಟಿಗೆ ಸಾಕ್ಷಿಯಾಗಿವೆ. ಹಾಗೆ ಅವರ ಪ್ರೇಮಚಿತ್ರಣದ ಗಂಭೀರ ಸನ್ನಿವೇಶಗಳನ್ನು ವೈಭವೀಕರಿಸುತ್ತವೆ,

ಹಣೆಯಲಿ ಕುಂಕುಮ, ಮೂಗಲಿ ಮೂಗುತಿ
ಕೊರಳಲಿ ಮಾಂಗಲ್ಯ;
ಪಕ್ಕದಿ ಮಲಗಿದೆ ತ್ರಿಜಗನ್ಮಾತೆಯೆ
ವಕ್ಷದ ವಾತ್ಸಲ್ಯ!
ಪ್ರೇಯಸಿ? ಸಹಧರ್ಮಿಣಿ? ಹೆಂಡತಿ? ತಾಯಿ?
ಲೌಕಿಕ ಸಂಬಂಧಕೆ ತೊದಲಿತೊ ಬಾಯಿ!

'ಅನುತ್ತರಾ' ಕವನ ಸಂಕಲನದ 'ಯಾರಿದು?' ಎಂಬ ಪುಟ್ಟ ಕವನದ ಈ ಸಾಲುಗಳು ಒಬ್ಬ ಹೆಣ್ಣನ್ನು ಅದರಲ್ಲೂ ಸಹಧರ್ಮಿಣಿಯನ್ನು ಕುವೆಂಪು ಕಂಡುಕೊಂಡ ದೃಷ್ಟಿಕೋನವನ್ನು ಪ್ರಚುರಪಡಿಸುತ್ತದೆ. ನೇಗಿಲಯೋಗಿಗೆ ಹೇಗೆ ಈ ಸಮಾಜದಲ್ಲಿ ಉತ್ತಮ ಸ್ಥಾನವನ್ನು ಕಲ್ಪಿಸಿಕೊಟ್ಟರೋ ಹಾಗೇ ಭಾರತೀಯ ನಾರಿಯನ್ನು ಗೌರವ ಘನತೆಯಿಂದ ಕಂಡ ಶ್ರೇಷ್ಠ

ವ್ಯಕ್ತಿ. ಕುವೆಂಪುರವರು ಸಾಂಸಾರಿಕ ಜೀವನವನ್ನು ಒಂದು ಯೋಗವೆಂದೇ ತಿಳಿದಿದ್ದರು. ಅವರ ಎಲ್ಲಾ ಉನ್ನತ ಸಾಧನೆಗಳಿಗೂ ಹಾಗೂ ತನ್ನ ಉದ್ಧಾರಕ್ಕೂ ಶ್ರೀಮತಿ ಹೇಮಾವತಿಯವರೇ ಮುಖ್ಯವೆಂದು ತಿಳಿದಿದ್ದರು. ಮಡಿಬಾಳ್ವೆಯ ರಸತಪಸ್ವಿಯಾದ ಕುವೆಂಪು ಅವರ ಮನಮನೆಯೊಡತಿಯಾದ ಹೇಮಾವತಿಯಮ್ಮನವರನ್ನು 'ಪಂಚಪ್ರಾಣಿ ಲಕ್ಷ್ಮೀ' ಎಂದು ಕರೆದಿದ್ದಾರೆ. ಕುವೆಂಪುರವರು ಹೇಮಾವತಿಯವರನ್ನು ವಿವಾಹವಾಗಿದ್ದು ಒಂದು ಯೋಗಾಯೋಗವೆಂದೇ ಹೇಳುತ್ತಾರೆ.

ಕುವೆಂಪುರವರ ಆ ಯೋಗಾಯೋಗ ಹೇಗಿತ್ತೆಂದರೆ, ತಾವು ಎಂ.ಎ. ಓದುತ್ತಿದ್ದಾಗ ೧೯೨೧ನೇ ಇಸವಿ ೨೭ರಂದು ದೇವಂಗಿ ರಾಮಣ್ಣಗೌಡರಿಗೆ ಒಂದು ಹೆಣ್ಣು ಮಗು ಹುಟ್ಟಿತು. ಆ ಹೆಣ್ಣು ಮಗುವಿಗೆ ಮೇಧಾವಿಯಾದ ಕುವೆಂಪುರವರೇ 'ಹೇಮಾವತಿ' ಎಂದು ನಾಮಕರಣ ಮಾಡಿದ್ದರು. ಮುಂದೆ ೧೬ ವರ್ಷಗಳ ನಂತರ ಅದೇ ಹೇಮಾವತಿಯವರೇ ಪುಟ್ಟಪ್ಪನವರ ಧರ್ಮಪತ್ನಿಯಾದರು. 'ಕೃತ್ತಿಕೆ' ಕವನ ಸಂಕಲನದ 'ಪ್ರೇಮಕ್ಕೆ' ಎಂಬ ಕವನದಲ್ಲಿ ತನ್ನ ಬಾಳ ಸಂಗಾತಿಯ ಬಗ್ಗೆ ಹಾಗೂ ಅವರ ಚೇತನದ ಮಹೋಲ್ಲಾಸವನ್ನು ಹೀಗೆ ವ್ಯಕ್ತಪಡಿಸಿದ್ದಾರೆ.

ಪ್ರೇಮಕ್ಕೆ
ಕಬ್ಬಗಗೆ ನಿನ್ನದೆಯೆ ಕಟ್ಟಕಡೆಯಾಶ್ರಮಂ
ಮೇಣುತ್ತಮಾಶ್ರಯಂ ಗಂಧಶೀತಲವಾರಿ
ಬೆಂದು ಬಂದೆನಗೆ ನೀಂ ಮಿಕ್ಕುದೆಲ್ಲಂದಾರಿ

..............................................................

ತತ್ವಕ್ಕೆ ಕಾವ್ಯಕ್ಕೆ ಪ್ರಕೃತಿ ಸೌಂದರ್ಯಕ್ಕೆ
ಭೋಗಕ್ಕೆ ತ್ಯಾಗಕ್ಕೆ ಮೇಣ್ ಬ್ರಹ್ಮಚರ್ಯಕ್ಕೆ
ಪ್ರೇರಕಂಪರಮಗತಿ ಸರ್ವಮುಂ ನೀ ನಕ್ಕೆ!
ಪ್ರೇಮಾವತಾರಿಣಿಯೆ, ಓ ನನ್ನ ಹೇಮಾಕ್ಷಿ
ನಿನ್ನಪ್ಪುಗೆಯೆ ನನಗೆ ಸತ್ಯಸ್ಯ ಸತ್ಯಮಂ

........................................................

........................................................

ನನ್ನ ಸಾಧನಮನಿತು ನಿನ್ನ ನೈವೇದ್ಯಕ್ಕೆ

ಹೇಮಾವತಿಯವರು ತಮ್ಮ ಶ್ರೀಮತಿಯಾಗುವುದಕ್ಕೆ ಮೊದಲೇ 'ಹೇಮಾಕ್ಷಿ' ಎಂದು ಪ್ರೀತಿಯಿಂದ ಸಂಬೋಧಿಸಿ, 'ನಿನ್ನ ಅಪ್ಪುಗೆಯೆ ನನಗೆ ಸತ್ಯಾರ್ಥ. ಸತ್ಯದ ದರ್ಶನವನ್ನು ತೋರಿ, ಆನಂದವನ್ನು ನೀಡಿ ಮಿಕ್ಕ ಎಲ್ಲ ಮಿಥ್ಯೆಗಳಿಂದ ನನ್ನನ್ನು ಪಾರುಮಾಡುತ್ತದೆ' ಎಂದು ಯಾವುದೇ ಸಂಕೋಚವಿಲ್ಲದೇ ನಲ್ಲೆಯೊಬ್ಬಳು ತನ್ನ ಬಾಳಿನಲ್ಲಿ ಎಷ್ಟು ಅವಶ್ಯಕ ಎಂಬುದನ್ನು

ಉತ್ಕಟವಾದ ಮನಸ್ಸಿನಿಂದ ಹೇಳುವುದು ತಿಳಿಯುತ್ತದೆ. ಪುಟ್ಟಪ್ಪನವರ ವಿವಾಹವು ಈಶ್ವರನಾಮ ಸಂವತ್ಸರ ಚೈತ್ರ ಬಹುಳ ೫ ಶುಕ್ರವಾರ ರಾತ್ರಿ ೧೨.೧೫ ನಿಮಿಷಕ್ಕೆ ಮಕರ ಲಗ್ನದಲ್ಲಿ ನೆರವೇರಿತು. ನಂತರ ಮೈಸೂರಿನ ಅವರ 'ಉದಯರವಿ' ಮನೆಯಲ್ಲಿ ಬಂದು ನೆಲೆಸಿದರು.

'ನಾನಿನಗೆ ನೀನನಗೆ ಜೇನಾಗುವಾ!
ರಸದೇವ ಗಂಗೆಯಲಿ ಮೀನಾಗುವಾ!
ಹೂವಾಗುವಾ ಹಣ್ಣಾಗುವಾ
ರತಿರೂಪಿ ಭಗವತಿಗೆ ಮುಡಿಪಾಗುವಾ
..................... ಬಾ ಬಾರ ಸಖಿ!

ಈ ರೀತಿ ಸಮಾನ ಹೃದಯಗಳು ಒಂದಾದವು. ಬಾ ಬಾರ ಸಖಿ ಎಂದು ದಾಂಪತ್ಯ ಜೀವನಕ್ಕೆ ಅಡಿಯಿಡಲು ತಮ್ಮ ಪ್ರೀತಿಯ ಪತ್ನಿ ಹೇಮಾವತಿಯನ್ನು ಪ್ರೀತಿಯಿಂದ ಸ್ವಾಗತಿಸಿದರು. ನಂತರದ ಅವಧಿಯಲ್ಲಿ ಅವರು ರಚಿಸಿದ ಹಲವಾರು ಕವಿತೆಗಳು ದಾಂಪತ್ಯದ ಪ್ರೇಮಗೀತೆಗಳಿಗೆ ಮುಡುಪಾದವು. ಪ್ರೇಮಗೀತೆ, ವಿರಹಗೀತೆಗಳ ಸಾಲುಸಾಲೇ ಶುರುವಾಯಿತು.

'ಒಲಮೆ ಒಂದು ದಿವ್ಯರಕ್ಷೆ
ಇಹ ಸಮಸ್ಯೆಗೆ!
ಮದುವೆ ಅದಕೆ ಮಧುರ ದೀಕ್ಷೆ
ಗೃಹ ತಪಸ್ಯೆಗೆ!'

ಎನ್ನುತ್ತಾ ದಂಪತಿ ಚೇತನಗಳ ವಿಕಾಸದ ಸಾಧ್ಯತೆಯನ್ನು ಅಧ್ಯಾತ್ಮಿಕವಾಗಿ ಎತ್ತಿ ಹಿಡಿಯುತ್ತಾರೆ.

'ಶಿವನೆನ್ನ ಸುಖಕ್ಕೆ ಸುಖಿ;
ಶಿವೆ ನಿನ್ನ ಸುಖಕೆ ಸುಖಿ
ಶಿವಶಿವೆಯರಾ ಸುಖವ
ಸವಿವಖಿಲ ಲೋಕ ಸುಖಿ!'

ಅವರ ಸಮಾನ ಹೃದಯಗಳ ದಾಂಪತ್ಯ ಜೀವನ ಯಾವುದೇ ಏರು-ಪೇರಿಲ್ಲದೆ, ಶಿವಶಿವೆಯರಂತೆ ಸಮಾನವಾಗಿ ಸಾಗಬೇಕೆಂಬುದನ್ನು ಈ ಕವನದ ಮೂಲಕ ತಿಳಿಸುತ್ತಾರೆ. "ಚಿ.ಸೌ. ಹೇಮಾವತಿ ನನ್ನ ಚೇತನವನ್ನು ಅರ್ಧಾಂಗಿಯಾಗಿ ಅಲ್ಲ ಪೂರ್ಣಾಂಗಿಯಾಗಿಯೇ ಆಲಿಂಗಾಕ್ರಮಿಸುತ್ತಾಳೆ. ನನ್ನ ಸದ್ಯದ ಜನ್ಮಕಾಯ ತನ್ನ ಪ್ರಾಣಮಯ ಮನೋಮಯ

ಕೋಶಗಳನ್ನು ಪೊರೆಕಳಚಿ ಹೊಸಹುಟ್ಟು ಪಡೆದು ದಿವ್ಯಯಾತ್ರೆಗೆ ಹೊರಡುತ್ತದೆ"[೩] 'ನಾ ನಿನಗೆ ನೀ ನನಗೆ ಜೇನಾಗುವಾ! ರಸದೇವ ಗಂಗೆಯಲಿ ಮೀನಾಗುವಾ!' ಎಂಬ ಮಾತಿನಲ್ಲಿ ಅರ್ಪಣಾಭಾವವಿದೆ. ಈ ಎರಡು ಸಾಲುಗಳಲ್ಲಿ ಏಳೇಳು ಜನ್ಮಗಳ ಮೈತ್ರಿ ಇರುವಂತೆ ಭಾಸವಾಗುತ್ತದೆ. ಇದು ಕುವೆಂಪು ಕಟ್ಟ ಬಯಸಿದ ದಾಂಪತ್ಯದ ಜೀವನ ಸ್ವರೂಪವನ್ನು ಗ್ರಹಿಸಲು ಸಾಧ್ಯವಾಗಿದೆ. ಕುವೆಂಪುರವರು ಹೆಣ್ಣನ್ನು ತುಂಬಾ ಗೌರವಾದರಗಳಿಂದ ಕಾಣುತ್ತಿದ್ದರು. 'ನಾನೆ ಪತಿ ನೀನೇ ಸತಿ ಒಂದೆ ದಂಪತಿ' ಎಂದು ಹಾಡಿ ದಾಂಪತ್ಯ ಸ್ವರೂಪವನ್ನು ವಿಶ್ವಕ್ಕೆ ಮನದಟ್ಟು ಮಾಡಿದ ದ್ರಷ್ಟಾರ ಕವಿ. ಈ ಮಾತು ಕೇವಲ ಕವನಗಳಲ್ಲಿ ಮಾತ್ರವಲ್ಲ, ಜೀವಂತವಾಗಿ ರೂಢಿಸಿಕೊಂಡರು. ಅವರ ಮಹಾಕಾವ್ಯ 'ಶ್ರೀ ರಾಮಾಯಣದರ್ಶನಂ'ದಲ್ಲಿ ಪ್ರತಿ ಸ್ತ್ರೀ ಪಾತ್ರಗಳನ್ನು ವಿಜೃಂಭಿಸಿ ಘನತೆ ಗೌರವಯುತ ಮೌಲ್ಯಗಳನ್ನು ಆ ಪಾತ್ರಗಳಿಗೆ ತುಂಬಿದ್ದಾರೆ. ಇವೆಲ್ಲವೂ ಅವರ ಜೀವನ ಪಾವಿತ್ರ್ಯವನ್ನು ಪ್ರಚುರಪಡಿಸುತ್ತವೆ.

'ಸತಿ ಎಂಬ ಮಮತೆಯಲಿ ನಾನುತಿಸುವವನಲ್ಲ
ಮೇಣಲ್ಲವಿದು ಪತಿಯ ಮೋಹದ ಅತಿಶಯೋಕ್ತಿ
ಅನುಭವವನಾಡುವೆನು, ನೀ ದೇವತಾ ವ್ಯಕ್ತಿ
ಕಣ್ಣು ಕೋರೈಸುವಂತಹ ಮಿಂಚಿನಂತಲ್ಲ;
ಧ್ರುವತಾರೆಯಂತೆ! ನಿಃಸ್ವಾರ್ಥ ಹೇಮಾಸತಿಯೆ,
ನೀನು ನನಗೆ ದೇವತೆಯ ಸಮಾನ ಎನ್ನುವರು
ನೀನು ಮಾವನ ಮಗಳೇ? ಗುರು ಕರುಣೆ ಇತ್ತಕೃಪೆ
ಅವನ ಆಶೀರ್ವಚನದೀ ಚೆಲ್ವು ರೂಪದಿಂ
ಬಂದೆನ್ನನೆತ್ತುತಿದೆ ಕತ್ತಲೆಯ ಕೂಪದಿಂ
ಬೆಳಕಿನೆತ್ತರಕೆ–ಎಂದೆದೆಮಟ್ಟಿ ನಂಬಿದಪೆ!
ದೇವಿ ಪ್ರತಿಭೆಗೆ ನೀನೆ ಭಾವ ವಿದ್ಯುಚ್ಛಕ್ತಿ;
ಕಲೆಗೆ ವಿದ್ಯಾಶಕ್ತಿ, ಪ್ರಾಣಕೆ ಪ್ರೇಮಶಕ್ತಿ'

(ಅನುತ್ತರಾ, ಪುಟ, ೨೬)

ಕುವೆಂಪುರವರು ತಮ್ಮ ಕವನಗಳಲ್ಲಿ ಪತ್ನಿಯನ್ನು ಭಗವತಿ, ಜಗನ್ಮಾತೆ, ಮಹಾಮಾತೆಗೆ ಹೋಲಿಸಿದ್ದಾರೆ. ಮಡದಿ ಮಾವನ ಮಗಳು ಎಂಬುದು ನಿಮಿತ್ತ ಅಷ್ಟೆ. ಆ ದೈವವು ಮಡದಿಯ ರೂಪದಲ್ಲಿ ತನ್ನ ಜನ್ಮದ ಅಂಧಕಾರವನ್ನು ಹೋಗಲಾಡಿಸಿ ಬೆಳಕಿನೆಡೆಗೆ ಕರೆದೊಯ್ಯಲು ನೀಡಿದ ದೈವಶಕ್ತಿ. ಈ ಹೆಣ್ಣು, ಈ ದೈವಶಕ್ತಿಯ ಸಹಕಾರವಿಲ್ಲದೇ ಏನೇನೂ

ಸಾಧ್ಯವಿಲ್ಲ. ತನ್ನ ಪ್ರಾಣಕ್ಕೆ ಪ್ರೇಮಶಕ್ತಿಯಾದ ಮಡದಿಯಿಂದ ಮಾತ್ರ ಸಂಸಾರ ಸ್ವರ್ಗವಾಯಿತು ಎಂದು ನಂಬಿದ್ದರು.

"ಹೆಣ್ಣು ಕೊರಳಿಗೆ ಬಿಗಿವ
ಕಲ್ಲು ಗುಂಡು!"
ಎನ್ನಬೇಡ; ಕೇಳೆನ್ನ
ಮದುವೆಗಂಡು;
ಸಂಸಾರ ಸಾಗರದಿ
ಹೆಣ್ಣು ಗಂಡು
ಕುತ್ತಿಗೆಗೆ ಗುಂಡಲ್ಲ
ಬೆನ್ಗೆ ಬೆಂಡು!
ಈಜಿಸೋತಂದು
ರೇಜಿಗೆಯು ಹಿಡಿದಂದು
ಮಳುಗಲೀಯದೆ ನಿಂದು
ಹೊರೆವುದಯ್ಯ;
ಬಾಳು ಹಣ್ಣಾದಂದು
ಬಳಲಿ ಬೆಂಡಾದಂದು
ಹೆಣ್ಣೆ ಹರಣವ ತಂದು
ಹೊರೆವಳಯ್ಯ!

'ಪ್ರೇಮಕಾಶ್ಮೀರ' ಕವನ ಸಂಕಲನದಲ್ಲಿ ಬರುವ ಈ ಸಾಲುಗಳು ಹೆಣ್ಣು ಗಂಡಿನ ಉತ್ತಮ ಗೆಳತಿ. ತನ್ನ ಒಡಲಿನ ಒಡನಾಡಿ, ಆತ್ಮದ ಸಂಗಾತಿ ಎಂದು ಮದುವೆ ಆಗ ಬಯಸುವ, ಗಂಡಿಗೆ ಕಿವಿಮಾತು ಹೇಳಿದ್ದಾರೆ. ಸಂಸಾರ ಸುಖದ ಅನುಭವವನ್ನು ತಿಳಿಸುತ್ತಾರೆ.

ನಮ್ಮ ಬಾಳಿಗೆ
ಸಾಕ್ಷಿ ಹೋಳಿಗೆ!
ನಾನು ಕಣಕ ನೀನು ಹೂರ್ಣ;
ನಿನ್ನನಪ್ಪೆ ನಾನು ಪೂರ್ಣ!
ನಾನಿಲ್ಲದ ನೀನು ಚೂರ್ಣ;
ನೀನಿಲ್ಲದೆ ನಾನು ಶೀರ್ಣ!
ಎರಡು ಹೆಸರು, ಒಂದೆ ಉಸಿರು
ನಾನು ಪತಿ, ನೀನು ಸತಿ, ಒಂದೆ ದಂಪತಿ!

'ದಂಪತಿ' ಕವನದ ಈ ಸಾಲುಗಳು (ಚಂದ್ರಮಂಚಕೆ ಬಾ ಚಕೋರಿ ಪುಟ. ೨೪) ಸತಿ–ಪತಿ ದಾಂಪತ್ಯದಲ್ಲಿ ಹೋಳಿಗೆ ಇದ್ದಂತೆ; ಸಂಸಾರದ ಸಾರ ಸರಿದೂಗಿಸಲು ಇಬ್ಬರೂ ಎರಡು ಹೆಸರು ಒಂದೇ ಉಸಿರಿನಂತಿರಬೇಕು ಎಂದಿದ್ದಾರೆ. ಸಂಸಾರ ಜೀವನ, ಸತಿ–ಪತಿ ದಾಂಪತ್ಯ ಎಂಬುದು ಪೂರ್ವ ಜನ್ಮದ ಸುಕೃತ ಎಂದು ಕವಿ ಕುವೆಂಪು ನಂಬಿದ್ದರು. ಅವರ 'ಯಾವ ಜನ್ಮದ ಮೈತ್ರಿ' ಕವನದಲ್ಲಿ ತಮ್ಮ ಬಂಧವು ಜನ್ಮ–ಜನ್ಮಾಂತರಗಳಿಂದ ಬಂಧಿಸಿಹುದೆಂದು ತಿಳಿಸುತ್ತಾರೆ. 'ಯಾವ ಜನ್ಮದ ಮೈತ್ರಿ ಈ ಜನ್ಮದಲಿ ಬಂದು ನಮ್ಮಿಬ್ಬರನು ಮತ್ತೆ ಬಂಧಿಸಿಹುದೋ ಕಾಣೆ' ಎಂಬ ನುಡಿಯಲ್ಲಿ ಹೇಮಾವತಿಯವರು ಹಾಗೂ ಕುವೆಂಪುರವರದು ಜನ್ಮ–ಜನ್ಮದ ಮೈತ್ರಿ ಎಂದೆನಿಸಿದೆ. ಸತಿ–ಪತಿ ದಾಂಪತ್ಯದಲ್ಲಿ ಹೊಸತನ ಮೂಡುತ್ತದೆ. ಈ ದಾಂಪತ್ಯಗೀತೆಯು ಜಗತ್ತಿನ ದಾಂಪತ್ಯಕ್ಕೆ ಮಾದರಿಯಾಗಿದೆ. ಕುವೆಂಪುರವರು ಮಹಾ ಆದರ್ಶವಾದಿ. ಅವರು ತಮ್ಮ ಕವನಗಳಲ್ಲಿ ಏನು ಹೇಳಿದ್ದಾರೋ ಹಾಗೆಯೇ ಬದುಕಿದವರು. ಅವರ ನಡೆ–ನುಡಿ ಎಲ್ಲವೂ ಆದರ್ಶಮಯವಾದುದು.

ಕುವೆಂಪುರವರು ವಿವಾಹ ಪೂರ್ವದ ಜೀವನಕ್ಕೂ, ವಿವಾಹದ ನಂತರದ ಜೀವನಕ್ಕೂ ತಮ್ಮಲ್ಲಾದ ಬದಲಾವಣೆಗೆ ಅವರೇ ಆಶ್ಚರ್ಯಪಟ್ಟದ್ದುಂಟು. 'ವಿರಹ'ದ ತಾಪವನ್ನು ಕುರಿತು ಅವರ 'ನೆನಪಿನ ದೋಣಿಯಲ್ಲಿ' ಹೀಗೆ ಹೇಳಿಕೊಂಡಿದ್ದಾರೆ. "ನನಗೆ ಅತ್ಯಂತ ಆಶ್ಚರ್ಯವಾಗುವಂತೆ ಮಹಾಯಾತನಾ ಕ್ಲಿಷ್ಟವಾದ ವಿರಹ ಶುರುವಾಯಿತು.! 'ವಿರಹ' ಪದವನ್ನು ಉಪಯೋಗಿಸಿ 'ವಿರಹಯಾತನೆ'ಯನ್ನು ಕಾವ್ಯಗಳಲ್ಲಿ ಚಿತ್ರಿಸಿದ್ದೆ. ಇತರ ಎಲ್ಲಾ ಮಹಾಕವಿಗಳ ಕಾವ್ಯನಾಟಕಗಳಲ್ಲಿಯೂ ವಿಪ್ರಲಂಭ ಶೃಂಗಾರದ ವಿರಹ ವರ್ಣನೆಗಳನ್ನು ಓದಿದ್ದೆ. ಆದರೆ, ವಿರಹಯಾತನೆ, ನರಕಯಾತನೆ, ಅರ್ಥವಾದುದು ಈಗಲೇ! 'ಅರ್ಥವಾದುದು' ಎಂದು ಬರೆದೆ; ಆದರೆ, ಬರೆಯಬೇಕಾದುದು ಅರ್ಥವಾಗದುದು ಎಂದೇ. ಇದ್ದಕ್ಕಿದ್ದ ಹಾಗೆ ನನಗೆ ಸಂಭವಿಸಿದ ಈ ಸಂಕಟದ ಮನಃಸ್ಥಿತಿ ನನಗೆ ಅರ್ಥವಾಗಲಿಲ್ಲ. ದಿಗ್ಭ್ರಮೆಯುಂಟು ಮಾಡಿತು! ನನ್ನ ಹೃದಯ ಸ್ಥಿತಿ ಬೆಂಕಿಗೆ ಬಿದ್ದು ಸುಡುತ್ತಿರುವ ಪತಂಗದಂತಾಯ್ತು. ಆಗ ನಾನು ಬರೆಯುತ್ತಿದ್ದ ಶ್ರೀ ರಾಮಾಯಣದರ್ಶನಂದಲ್ಲಿ ಎಲ್ಲೆಲ್ಲಿ ಈ ವಿಯೋಗ ದುಃಖ ದಾವಾನಲರನ ವರ್ಣನೆ ಇದೆಯೋ ಅಲ್ಲೆಲ್ಲ ನಾನು ಅನುಭವಿಸಿದ ಆ ಒಲವಿನ ಅಗಲುವಿಕೆಯ ಘೋರ ವೇದನೆಯೇ ಚಿತ್ರಿತವಾಗಿದೆ ಎಂದು ತಿಳಿಯಬಹುದು"[೪]

ಕುವೆಂಪುರವರ ಈ ಮಾತುಗಳನ್ನು ಗಮನಿಸಿದರೆ, ಬಹುಶಃ ಈ ಎಲ್ಲಾ ಕಾರಣಕ್ಕಾಗಿಯೇ ಇವರ ಗುರುಗಳು ಹಿತಚಿಂತಕರು ಇವರನ್ನು ಗೃಹಸ್ಥರಾಗಲು ಒತ್ತಾಯಿಸಿದ್ದು. ಈ ವ್ಯಕ್ತಿ ಗೃಹಸ್ಥನಾದರೆ, ಅತ್ಯಂತ ಉನ್ನತ ನೆಲೆಯಲ್ಲಿ ಶೃಂಗಾರ, ವಿರಹ ಕಾವ್ಯಗಳು ಮೂಡಿ ಕನ್ನಡ ಸಾರಸ್ವತ ಲೋಕದಲ್ಲಿ ಅಚ್ಚಳಿಯದೆ ಉಳಿಯುತ್ತವೆ ಎಂದು. ಗೃಹಸ್ಥರಾದ ನಂತರ

ಇವರ ಸಾಹಿತ್ಯದಲ್ಲಿನ ವ್ಯುತ್ಪತ್ತಿ ಪ್ರತಿಭೆಯಲ್ಲಿ ಹೊಸ ಹುರುಪು ಮೂಡಿತು. ತಮ್ಮ ಸ್ಫೂರ್ತಿಯ ಸೆಲೆಯಾಗಿ ಮಡದಿ ಹೇಮಾವತಿಯವರು ಉತ್ಸಾಹ ತುಂಬಿದರು. ಇದಕ್ಕೆ ಅವರ 'ಪ್ರಥಮ ಮಿಲನ' ಕವನ ಸಾಕ್ಷಿಯಾಗಿದೆ.

'ಮೊದಲನೆಯ ಮಿಲನವೇನ್?
ಅಹುದು ಈ ಜನ್ಮದಲಿ!
ಇಲ್ಲದಿರೆ, ಮರೆತ ಚಿರಪರಿಚಿತೆಯನಿನ್ನೊಮ್ಮೆ
ಎದುರುಗೊಂಡಂತಾದುದೇಕೆ!
ಜನ್ಮ ಜನ್ಮಾಂತರದ ನಲ್ಲೆಯಾಕೆ!'

ಚಿರಪರಿಚಿತಳಾಗಿ ಅವಳನ್ನು ಸಂಧಿಸಿದ್ದು ಇದು ಮೊದಲನೆ ಮಿಲನವೇ ಆಗಿರಬಹುದು. ಆದರೆ, ಇದು ಈ ಜನ್ಮದಲ್ಲಿ. ಆಕೆಗೂ ತನಗೂ ಜನ್ಮಜನ್ಮಾಂತರದ ಸಂಬಂಧವಾಗಿರುವುದರಿಂದಲೇ ನನಗೀ ಆನಂದ ಎನ್ನುತ್ತಾರೆ. ಪ್ರಥಮ ಮಿಲನದ ದಿನವೇ ನನಗೆ ಈ ಆನಂದ, ಗಾಢವಾದ ಪ್ರೀತಿ ಹೊಮ್ಮಬೇಕೆಂದರೆ, ಹಿಂದಿನ ಜನ್ಮದಲ್ಲಿ ಅಪೂರ್ವ ಪ್ರೇಮವಿರಲೇಬೇಕು? ಈಕೆ ಜನ್ಮಾಂತರದ ಗೆಳತಿ, ಜನ್ಮಜನ್ಮಗಳ ನಡುವೆ ಉಂಟಾದ ಈ ವಿರಹವೇ ಇಂದು ಈ ಮೊದಲ ಮಿಲನದಲ್ಲಿ ಅಪರಿಮಿತ ಆನಂದವನ್ನು ಅನುಭವಿಸುವಂತಾಯಿತು ಎನ್ನುತ್ತಾ,

'ಅಯ್ಯೋ ಆ ಜೇನಿರುಳು ಬೆಳಗಾದುದೇಕೆ?
ನಮ್ಮಿರ್ವರಾ ಬಿಗಿದ ನಲ್ಮೆತ್ತೋಳ್ ತಾವರೆಯ ಸೆರಗೆ
ಬಿಡುಗಡೆಯ ಹಾಳು ರವಿ ಉದಯಿಸಿದನೇಕೆ?'

ಎಂದು ಕವನದ ಕೊನೆಯ ಸಾಲುಗಳಲ್ಲಿ ಉದಯವಾದ ರವಿಗೆ ಧಮಕಿ ಹಾಕುತ್ತಾರೆ (ಜೇನಾಗುವಾ, ಉದಯರವಿ ಪ್ರಕಾಶನ, ಜೇನಿರುಳು, ಪುಟ. ೪).

'ನೀನು ಬಳಿಯಿಲ್ಲದಿರೆ,
ಓ ನಲ್ಲೆ ಹೇಮಾಕ್ಷಿ,
ಜಗವೆಲ್ಲ ಜಡಬಂಡೆ,
ಬೇಸರದ ಬೀಡು!
ನೀನಗಲಿದೀ ಕವಿಗೆ ಇಂದು ಈ ಮಲೆನಾಡು
ಹಿರಿಮರಳುಗಾಡು (ಹೇಳೆ ನಾಚಿಕೆಗೇಡು)'

(ಜೇನಾಗುವಾ ಸಂಕಲನ, ಪ್ರಥಮ ವಿರಹ, ಪುಟ. ೫)

ತನ್ನ ಹೇಮಾಕ್ಷಿ ದೂರ ಸರಿದರೆ ಕವಿಗೆ ಆಗುವ ಅನುಭವ ಹೇಳತೀರದು. ಈ ಸಾಲುಗಳಲ್ಲಿ ಅವರ ವಿರಹದ ನೋವಿನೊಡನೆ, ಅವರ ಅತಿಶಯವಾದ ಪತ್ನಿ ಪ್ರೇಮದ ಆಳದ ಅರಿವೂ ನಮಗೆ ತಿಳಿಯುತ್ತದೆ. ಮನೆಯೊಡತಿ 'ಗೃಹಲಕ್ಷ್ಮಿ'ಯಂತೆ. ತನ್ನ ಮಡದಿ ಮೊದಲನೇ ಬಾರಿ ತವರೂರಿಗೆ ಹೋಗುವಾಗ ಬುದ್ಧಿಮಾತನ್ನು ಹೇಳುವರು. ಅದು ಅವರ 'ನಲ್ವಾತು' ಎಂಬ ಕವನದಲ್ಲಿ ಹೀಗಿದೆ. "ಗುಣ್ಪಿರಲಿ ನಡೆಯಲ್ಲಿ, ನುಣ್ಪಿರಲಿ ನುಡಿಯಲ್ಲಿ, ಸೊಂಪಿರಲಿ ಶೀಲದಲಿ, ಚೆಲ್ವಿನ ಕಣಿ" – ಈ ಮಾತುಗಳಲ್ಲಿ ಹೇಮಾವತಿಯವರ ಮಾತಿನ ಮೂಲಕ ಕುವೆಂಪುರವರ ಘನತೆಯನ್ನು ಜನ ತೂಕ ಮಾಡಿ ಅಳೆಯುತ್ತಾರೆಂಬುದು ಹಾಗೂ ಹೇಮಾವತಿಯವರ ವ್ಯಕ್ತಿತ್ವ ಕುವೆಂಪುರವರ ಮೇಲೆ ಬೀರಿದ ಪ್ರಭಾವವನ್ನು ಎಷ್ಟಿತೆಂಬುದರ ಪರಿಚಯವಾಗುತ್ತದೆ. ಅವರ 'ವಿರಹಚಿತೆ' ಕವನದಲ್ಲಿ ಹೆಂಡತಿಯು ದೂರಾದಾಗ ಆಗುವ ವಿರಹ ವ್ಯಥೆಯನ್ನು ತಾಳಲಾರದೆ ಹೀಗೆಂದಿದ್ದಾರೆ.

'ಗೃಹಿಣಿ, ನೀನೆ ಗೃಹದ ದೇವಿ
ನೀನು ದೂರ ಹೋದರೆ
ಮಸಣದೊಂದು ಹಾಳುಬಾವಿ
ಗೃಹವಿದು! ಮನ ಎಂಬರೆ?' (ಜೇನಾಗುವ, ಪುಟ ೨೨)

ಹೆಂಡತಿಯ ಸನಿಹವನ್ನು ಎಷ್ಟು ಅಪೇಕ್ಷಿಸಿದ್ದರೂ ಆಕೆ ದೂರ ಹೋದಾಗ ವಿರಹದ ನೋವಿನಿಂದ ಬಳಲಿ ಬೆಂಡಾಗುತ್ತಿದ್ದರು. ಇಂತಹ ಕವಿಹೃದಯದಲ್ಲಿ ವಾತ್ಸಲ್ಯ, ಮಮತೆಯೂ ಸಹ ತಾಯಿಯ ಹೃದಯದಂತೆ ತುಂಬಿ ಹರಿಯುತ್ತಿತ್ತು. 'ಗರ್ಭಗುಡಿ' ಎಂಬ ಕವನದಲ್ಲಿ ತಮ್ಮ ಮೊದಲ ಮಗು ತೇಜಸ್ವಿ ಹೇಮಾವತಿಯವರ ಗರ್ಭದಲ್ಲಿದ್ದಾಗ ಅವರಿಗೆ ಎಲ್ಲಿಲ್ಲದ ಸಡಗರ, ಚಡಪಡಿಕೆಯನ್ನು ಹೀಗೆ ಹರಿಸಿದ್ದಾರೆ.

'ಬಳೆಯುತಿರೆ ದಿವ್ಯಾರ್ಭಕಂ ಗರ್ಭಗುಡಿಯಲ್ಲಿ
ನಿನ್ನ ಮೈ, ಗರ್ಭಿಣಿಯೆ, ದೇವಾಲಯಂ; ಪೂಜ್ಯೆ
ನೀನೆನಗೆ, ಓ ಲಕ್ಷ್ಮಿ, ಓ ಸೃಷ್ಟಿ ಸಾಮ್ರಾಜ್ಯೆ,
..................................................................
ಪೂರ್ಣಾಂಗಿ, ತೇಜಸ್ವಿ ಪೂರ್ಣಚಂದ್ರ ಶರೀರೆ,
ಶಿವಕೃತಿ ಕಲಾರಂಗಮೆನಗೆ ನೀನ್, ಓ ನೀರೆ!'
(ಜೇನಾಗುವಾ, ಪುಟ ೧೮)

ಈ ರೀತಿ ಗರ್ಭದಲ್ಲಿರುವಾಗಲೇ ಹುಟ್ಟುವ ಮಗುವಿಗೆ ಪರಮಾತ್ಮನಲ್ಲಿ ಪ್ರಾರ್ಥನೆ ಸಲ್ಲಿಸಿ, 'ನೀನೆಮ್ಮ ಪ್ರಾರ್ಥನೆಯ ಶಿಶು ಕಣಾ, ತೇಜಸ್ವಿ' ಎಂದ ಕುವೆಂಪು ದಂಪತಿಗಳು ದಾಂಪತ್ಯ ಜೀವನ ಪ್ರತಿಕ್ಷಣವೂ ಹೀಗೇ ಸಾಗಬೇಕು ಎಂಬುದನ್ನು ನಮ್ಮಲ್ಲಿ ಅರಿವು

ಮೂಡಿಸುತ್ತಾರೆ. ವಾತ್ಸಲ್ಯಮಯಿ ಕುವೆಂಪುರವರು ಪುತ್ರ ಅಗಲಿಕೆಯಿಂದ ಉಂಟಾದ ನೋವನ್ನು 'ವಾತ್ಸಲ್ಯವಿರಹಿ' ಕವನದಲ್ಲಿ ಹೀಗೆ ದಾಖಲಿಸುತ್ತಾರೆ. "ನೀನು ಅಮ್ಮನ ಕೂಡಿ ಅಜ್ಜಿ ಮನೆಗೆ ಹೋದಿರುಳು ಬೆಳಗಾಯ್ತು ಎಂತೋ ಕೊನೆಗೆ ...... ಶೂನ್ಯತೆಯೆ ಮಲಗಿತ್ತು ಇಡೀ ಮಂಚದಲ್ಲಿ". ತಮ್ಮ ಎರಡನೆಯ ಮಗ ಹುಟ್ಟಿದ ಸಂದರ್ಭದಲ್ಲಿ 'ಕೋಕಿಲೋದಯ ಚೈತ್ರ' ಎಂಬ ಕವನ ಬರೆದಿದ್ದಾರೆ. 'ಬಂದನಿದೋ ಕೋಕಿಲೋಲ್ಲಾಸ ಚೈತ್ರ, ಕವಿಯ ಜೀವನ ಸುಖವ ಹಿತ್ರಂ' ಎನ್ನುವ ನುಡಿಗಳಲ್ಲಿ ಕವಿಯಲ್ಲಿ ರಸ ರೋಮಾಂಚನ ಭಾವ ಎದ್ದು ಕಾಣುತ್ತದೆ.

ತನ್ನ ಸಂಸಾರದ ಬಗೆಗೆ ಮಡದಿ ಮಕ್ಕಳ ಬಗೆಗೆ ಇಷ್ಟು ಸವಿವರವಾಗಿ ಕವನಗಳನ್ನು ಬರೆದ ಕವಿ ಮಂದಿ ಕನ್ನಡ ಸಾರಸ್ವತ ಲೋಕದಲ್ಲಿಯೇ ವಿರಳ. ದಾಂಪತ್ಯ ಜೀವನದ ಸಾಂಸಾರಿಕ ವಿಷಯಗಳ ಎಲ್ಲಾ ಅನುಭವಗಳನ್ನು ಅತ್ಯಂತ ಮಧುರವಾಗಿ, ಕೋಮಲವಾಗಿ, ಹಿತಮಿತ ಸರಳ ಸುಂದರವಾಗಿ ಒಂದೊಂದು ಕವನದಲ್ಲೂ ಒಡ ಮೂಡಿವೆ.

ಕುವೆಂಪುರವರಿಗೆ ದಾಂಪತ್ಯ ಎನ್ನುವುದು ಕೇವಲ ಗಂಡು-ಹೆಣ್ಣು ಕೂಡಿ ನಡೆಸುವ ಜೀವನ ಮಾತ್ರವಾಗಿರದೆ ಅದೊಂದು ಅರ್ಥಗರ್ಭಿತವಾದ ಮಹಾತತ್ವದಂತೆ ತೋರಿದೆ. ಕೈಹಿಡಿದ ಪತ್ನಿಯನ್ನು ಕವಿಗಳು ಜಗನ್ಮಾತೆ, ಆದಿಶಕ್ತಿಗೂ ಹೋಲಿಸಿದುಂಟು.

"ನನ್ನ ಚಿನ್ನ!
ನನ್ನ ಹೇಮಿ!
ನನ್ನ ಶ್ರೀಮತಿ!
ನನ್ನ ರಾಣಿ!
ನನ್ನ ಮುದ್ದಿನ ಹೆಂಡತಿ
ನನ್ನ ದೇವಿ,
ಜಗನ್ಮಾತೆ
ಆದಿಶಕ್ತಿ
ಮಹಾಮಾಯೆ,
ಅನುತ್ತರಾ
ಓಂ!"
ಸರ್ವಮಂಗಳ ಮಾಂಗಲ್ಯೇ.......... (ಅನುತ್ತರಾ, ಪುಟ. ೪)

"ಸತಿಯ ವಿಚಾರದಲ್ಲಿ ಮೊದಲಿನಿಂದಲೂ ನನಗಿದ್ದ ಈ ಪವಿತ್ರ ಭಾವನೆ ಮೇಲೇರುತ್ತಾ ಹೋಗಿ, ನಾನಾ ಘಟ್ಟಗಳನ್ನು ದಾಟಿ, ತುತ್ತ ತುದಿಯಲ್ಲಿ ಆಕೆ ಋತಚಿನ್ಮಯೀ, ಜಗನ್ಮಾತೆಯ ಕೋಟ್ಯಂತರ ಅಸಂಖ್ಯ ಆವಿರ್ಭಾವದ ಅವತರಣಗಳಲ್ಲಿ ಒಂದೆಂಬ ಬುದ್ಧಿಗೆ

ನೆಲೆಸಿತು!"[3] ಇದು ಅವರ ಆತ್ಮಕಥನದಲ್ಲಿ ತಮ್ಮ ಸ್ಫೂರ್ತಿದಾಯಿನಿಯಾದ, ಚೈತನ್ಯ ಶಕ್ತಿಯಾದ ಹೇಮಾವತಮ್ಮನವರ ಬಗ್ಗೆ ತಾವೇ ಹೇಳಿದ ಮಾತು.

ಕುವೆಂಪುರವರು ಹೆಣ್ಣನ್ನು ಪ್ರೇಮಮಯಿ, ತ್ಯಾಗಮಯಿ, ವಾತ್ಸಲ್ಯಮಯಿ, ಶಕ್ತಿ ಸ್ವರೂಪಿಣಿ ಎಂದು ಮಾತ್ರವಷ್ಟೇ ವರ್ಣಿಸಿಲ್ಲ. 'ಒಲಿದರೆ ನಾರಿ, ಮುನಿದರೆ ಮಾರಿ' ಎಂಬಂತೆ, ಹೆಣ್ಣು ಕಾಳಿ, ಕರಾಳಿಯೂ ಆಗಬಹುದು ಎಂದಿದ್ದಾರೆ.

"ನೀನು ಶಕ್ತಿಯಂಶಳಲ್ತೆ?
ನಿನ್ನ ಶಕ್ತಿಗಿಹುದೆ ಎಲ್ಲೆ?
ನರಕ ಶೂಲಕೆತ್ತಬಲ್ಲೆ;
ಸ್ವರ್ಗ ವೃಕ್ಷಕೊತ್ತಬಲ್ಲೆ!
ಇಹುದೆ ನಿನ್ನ ಶಕ್ತಿಗೆಲ್ಲೆ
ಹೇಳೆ ನನ್ನ ಮುದ್ದುನಲ್ಲೆ?"

(ಚಂದ್ರ ಮಂಚಕೆ ಬಾ ಚಕೋರಿ, ಪುಟ. ೧೦)

ಹೆಣ್ಣು ಎಂತಹ ಸಹನಾಮಯಿಯೋ, ಅವಳಲ್ಲಿ ತಾಳ್ಮೆ, ಕರುಣೆ, ಅರ್ಪಣಾಭಾವ–ವಿರುವುದೋ ಹಾಗೇ ಅವಳ ಸಹನೆ ಮೀರಿದರೆ, ನರಕಕ್ಕೂ ತಳ್ಳುವ ಶಕ್ತಿವಂತಳೆಂದೂ ತಿಳಿಸಿದ್ದಾರೆ. ಆಕೆಯನ್ನು ಒಲಿಸಿಕೊಳ್ಳುವುದೂ, ಕೆರಳಿಸುವುದೂ ಗಂಡಿನ ಕೈಯಲ್ಲಿಯೇ ಇದೆ.

"ಯಾವ ದೇವತೆಯೊಲಿದರೇನು?
ಮನೆಯ ದೇವತೆ ಮುಳಿದರೆ?
ಯಾವ ದೇವತೆ ಹೊಗಳಲೇನು?
ಮನೆಯ ದೇವತೆ ಹಳಿದರೆ"

(ಚಂದ್ರ ಮಂಚಕೆ ಬಾ ಚಕೋರಿ, ಪುಟ, ೩೨)

ಗಂಡಾದವನು ಗೃಹದೇವತೆಗೆ ಗೌರವ ನೀಡಬೇಕು. ಆಗ ಮಾತ್ರ ಇಡೀ ಜಗತ್ತೇ ಅವನ ಕೈಯಲ್ಲಿದ್ದಂತಾಗುತ್ತದೆ ಎಂದು ಗಂಡಿಗೆ ತಿಳಿ ಹೇಳಿದ್ದಾರೆ.

ಕುವೆಂಪುರವರು ತಮ್ಮ 'ಚಂದ್ರ ಮಂಚಕೆ ಬಾ ಚಕೋರಿ' ಸಂಕಲನದಲ್ಲಿ ತನ್ನ ಮನದೊಡತಿಗೆ ಪ್ರೀತಿಯಿಂದ ಅರ್ಪಣೆ ಮಾಡಿರುವ ಭಾವದಲ್ಲೇ ಅವರ ಪ್ರೀತಿಯ ಉತ್ಕಟತೆಯನ್ನು ಗ್ರಹಿಸಬಹುದು.

"ನನ್ನ ಜೀವನ ಲಕ್ಷ್ಮಿಗೆ
ನನ್ನ ಹೃದಯದ ವಾಣಿಗೆ
ಪ್ರೇಮದೀ ಕೃತಿಕಾಣಿಕೆ

ಚೆಲುವಿನೊಲವಿನ ರಾಣಿಗೆ
ಆನಂದದೀ ಕೇಂದ್ರಕೆ!
ಸೌಂದರ್ಯದೀ ನೇಮಿಗೆ
ರಸತಪಸ್ಯೆಯ ಕಾಣಿಕೆ
ಗೃಹ ತಪಸ್ವಿನಿ ಹೇಮಿಗೆ"

ಮಡದಿಯೊಬ್ಬಳಿಗೆ ತನ್ನ ಪ್ರೀತಿಯ ಪತಿಯಿಂದ ಮಿಗಿಲಾದ ಕಾಣಿಕೆ ಇನ್ನೊಂದುಂಟೇ? ಕವಿಗಳು ಬಹುಪಾಲು ಕವನಗಳಲ್ಲಿ ಒಂದಿಲ್ಲೊಂದು ರೀತಿಯಲ್ಲಿ ತಮ್ಮ ಮನದರಸಿಯ ಹೆಸರನ್ನು ತಂದಿರುವುದನ್ನು ಕಾಣಬಹುದು. ಉದಾ:– ನನ್ನ ಹೇಮಿ, ಹೇಮಾಕ್ಷಿ, ಹೇಮಿಗಂಡ, ಹೇಮಾಂಗಿನಿ, ಹೇಮಬಂಧನ, ಹೇಮಲತೆ, ಪ್ರೇಮಹೇಮ, ಹೇಮೋಜ್ವಲಾವೇಶ, ಹೇಮಾರೂಪಸೀ, ಹೇಮಾಸತಿಯೇ, ಹೇ.ಮಾ.ವ.ತಿ, ಹೇಮೇಂದು ಇವೆಲ್ಲಾ ಅವರ ಪ್ರೇಮದ ಉತ್ಕಟತೆಯನ್ನು ಪ್ರತಿಬಿಂಬಿಸುತ್ತವೆ.

ಹೀಗೆ ಬದುಕಿನುದ್ದಕ್ಕೂ ಅರ್ಧನಾರೀಶ್ವರರಂತೆ ಬಾಳಿದ ಕುವೆಂಪು ದಂಪತಿಗಳು 'ನಾ ನಿನಗೆ, ನೀ ನನಗೆ' ಎಂದು ಬದುಕಿನ ಸಾರ್ಥಕತೆಯನ್ನು ಮೆರೆದವರು. ಪತ್ನಿ ವಿಯೋಗದ ನಂತರ ಕವಿ ಹೆಚ್ಚು ಅಂತರ್ಮುಖಿಗಳಾಗತೊಡಗಿದರು. ಪತ್ನಿಯ ಭಾವಚಿತ್ರದ ಮುಂದೆ ಕುಳಿತು ಧ್ಯಾನ ಮಗ್ನರಾಗಿ ಯಾವುದೋ ಲೋಕದಲ್ಲಿ ಕುಳಿತಿರುವಂತೆ ಕಾಲಕಳೆದರು. ಇಂತಹ ಕೀರ್ತಿ ಶರೀರ ಇಂದು ನಮ್ಮೊಂದಿಗಿಲ್ಲದಿದ್ದರೂ ಅವರ ತತ್ವಾದರ್ಶಗಳು ಮಾತ್ರ ಸಹೃದಯರಲ್ಲಿ ಜೀವಂತವಾಗಿವೆ.

**ಕೆ.ಎಸ್. ನರಸಿಂಹಸ್ವಾಮಿ ಅವರ ಕವನಗಳಲ್ಲಿ ದಾಂಪತ್ಯ ಚಿತ್ರಣ**

'ಒಲವಿನ ಕವಿ' ಎಂದೇ ಕನ್ನಡದ ಸಹೃದಯರಿಂದ ಕರೆಸಿಕೊಂಡ ಕವಿ ಕೆ.ಎಸ್. ನರಸಿಂಹಸ್ವಾಮಿಯವರು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಬಹುಮುಖ್ಯವಾದವರು. ೧೯೪೩ರಲ್ಲಿ ಇವರ ಮೊದಲ ಕವನ ಸಂಕಲನ 'ಮೈಸೂರು ಮಲ್ಲಿಗೆ' ಪ್ರಕಟವಾಯಿತು. ಸುಮಾರು ಹದಿನೆಂಟರಿಂದ ಇಪ್ಪತ್ತರವರೆಗೆ ಮರುಮುದ್ರಣ ಕಂಡಿರುವ ಈ ಕೃತಿ ಪ್ರಾಯಶಃ ಕನ್ನಡದಲ್ಲಿ ಮತ್ತೊಂದಿಲ್ಲ. ನಿಜಕ್ಕೂ ಈ ಕೃತಿ ಕನ್ನಡ ಸಾಹಿತ್ಯದಲ್ಲೇ ಒಂದು ವಿಶಿಷ್ಟವಾದ ಸಂಚಲವನ್ನುಂಟುಮಾಡಿತೆನ್ನಬಹುದು. ತಮ್ಮ ಚೊಚ್ಚಲ ಕವನ ಸಂಕಲನದಿಂದಲೇ ಕವಿ ಕೆ.ಎಸ್.ನ. ಅವರಿಗೆ ಸಿಕ್ಕಂತಹ ಜನಪ್ರಿಯತೆ, ಗೌರವ, ಮನ್ನಣೆ ಪ್ರಾಯಶಃ ಕನ್ನಡ ಸಾರಸ್ವತ ಲೋಕದಲ್ಲಿ ಮತ್ತೊಬ್ಬ ಕವಿಗೆ ಸಿಕ್ಕಿಲ್ಲ ಎಂದರೆ ಅತಿಶಯೋಕ್ತಿಯಾಗಲಾರದು. ಹೀಗೆ ಮಧುರವಾದ, ಅನನ್ಯವಾದ ತಮ್ಮ ಪ್ರೇಮ–ದಾಂಪತ್ಯದ 'ತೆರೆದ ಬಾಗಿಲು' ಕವನಗಳವರೆಗೆ

ನಡೆದ ಈ ಕವಿಯ ಕಾವ್ಯದ ಒಡೆದು ತೋರುವ ಬೆಳವಣಿಗೆ ಬೆರಗು ಹುಟ್ಟಿಸುವಂಥದ್ದು. ಈ ಕವಿಯ ಕಾವ್ಯ ಈಗ ಕನ್ನಡ ಸಂಸ್ಕೃತಿಯ ಬಹು ಮುಖ್ಯ ಆಸ್ತಿಯಾಗಿ ಪರಿಣಮಿಸಿದೆ.

ಮಂಡ್ಯ ಜಿಲ್ಲೆಯ ಕಿಕ್ಕೇರಿ ಗ್ರಾಮದ ಸುಬ್ಬರಾಯರ ಹಾಗೂ ಹೊಸಹೊಳಲು ನಾಗಮ್ಮನವರ ಪ್ರೀತಿಯ ಸುಪುತ್ರರಾಗಿ ಕೆ.ಎಸ್. ನರಸಿಂಹ ಸ್ವಾಮಿಯವರು ಜನವರಿ ೨೬, ೧೯೧೫ ರಂದು ಜನಿಸಿದರು. ತಮ್ಮ ಪ್ರೌಢಶಿಕ್ಷಣವನ್ನು ಮೈಸೂರಿನ ಮಹಾರಾಜ ಹೈಸ್ಕೂಲಿನಲ್ಲಿಯೂ, ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ತಮ್ಮ ಬಿ.ಎ. ಪದವಿಯನ್ನು ಮುಗಿಸುವಲ್ಲಿ ಕೆ.ಎಸ್.ನ ಅವರ ಓದು ನಿಂತುಹೋಯಿತು.

ನಂತರ ೧೯೩೬ರಲ್ಲಿ ತಿಪಟೂರಿನ ವೆಂಕಮ್ಮನವರೊಂದಿಗೆ ವಿವಾಹವಾಯಿತು. ೧೯೩೭ ರಲ್ಲಿ ಸರ್ಕಾರಿ ನೌಕರಿ ಸೇರಿ ಮೈಸೂರು, ಬೆಂಗಳೂರು, ನಂಜನಗೂಡಿನಲ್ಲಿ ತಮ್ಮ ಸೇವಾವಧಿ ಮುಗಿಸಿ ೧೯೭೦ರಲ್ಲಿ ನಿವೃತ್ತರಾದರು. ಕೆ.ಎಸ್.ನ. ದಂಪತಿಗಳಿಗೆ ನಾಲ್ವರು ಗಂಡುಮಕ್ಕಳು, ನಾಲ್ವರು ಹೆಣ್ಣುಮಕ್ಕಳು, ಜೀವನದ ಉದ್ದಕ್ಕೂ ಆರ್ಥಿಕ ಕ್ಲೇಶ, ಸಾಂಸಾರಿಕ ತಾಪತ್ರಯಗಳಲ್ಲಿ ಬದುಕನ್ನು ತೇಯುತ್ತಾ ಬಂದರೂ ಅದರ ಚೆಲುವನ್ನು ತೆರೆದು ತೋರುತ್ತಾ ಜೀವನಮುಖಿಯಾದ ಕಾವ್ಯವನ್ನು ತಮ್ಮ ವೈಯಕ್ತಿಕ ಬದುಕಿನ ನೆಲೆಯಿಂದಲೇ ಎತ್ತಿಕೊಡುತ್ತಾ ಹೋದದ್ದು ಈ ಕವಿಯ ವೈಶಿಷ್ಟ್ಯ.

ಕೆ.ಎಸ್.ನ ಅವರ ತಂದೆ ಸುಬ್ಬರಾಯರು ಪಿಟೀಲುವಾದಕರೂ, ಸಂಗೀತ ಪ್ರೇಮಿಗಳೂ ಆಗಿದ್ದು, ಸಂಗೀತಗಾರರ ಒಡನಾಟವಿದ್ದು, ಸದಾ ಮನೆಯಲ್ಲಿ ಸಂಗೀತದ ವಾತಾವರಣವಿದ್ದುದ್ದರಿಂದಲೋ ಏನೋ ಇವರಿಗೂ ಸಾಹಿತ್ಯದ ಮೇಲೆ ಅಭಿರುಚಿ ಬಂದಿರಬಹುದು. ಮೂಲತಃ ಸಾಹಿತ್ಯ ಸಂಬಂಧಿ ಅಧ್ಯಯನವಾಗಲೀ, ವೃತ್ತಿಯಾಗಲೀ ಆರಿಸಿಕೊಂಡಿರದ ಕೆ.ಎಸ್.ನ ಅವರಿಗೆ ಕವನ ರಚನೆಗಳಲ್ಲಿ ವಿಶೇಷವಾದ ಆಸಕ್ತಿ ಇದ್ದಂತೆ ತಿಳಿಯುತ್ತದೆ. ಇದಕ್ಕೆ ತಂದೆ ಸುಬ್ಬರಾಯರೂ ಪ್ರೋತ್ಸಾಹಿಸಿದರು. ಸುಸಂಸ್ಕೃತವಾದ ವಾತಾವರಣ ಮನೆಯಲ್ಲಿ ದೊರೆತಿದ್ದುದ್ದರಿಂದ ಕವಿಯ ಸೃಜನಶೀಲತೆಗೆ ವಿಶೇಷ ಅಭಿವ್ಯಕ್ತಿ ಸಿಕ್ಕಂತಾಯಿತು. ಸ್ವತಂತ್ರ ಅಧ್ಯಯನ, ಕಾವ್ಯ ರಚನೆಗೆ ಕಾರಣವಾಯಿತು. 'ಒಲವಿನ ಕವಿ', 'ಪ್ರೇಮ ಕವಿ' ಎಂದೇ ಜನಮಾನಸದಲ್ಲಿ ಚಿರಸ್ಥಾಯಿಯಾಗಿರುವ ಕೆ.ಎಸ್.ನ ಅವರು ತಮ್ಮ ಬದುಕಿನದ್ದಕ್ಕೂ ಕಾವ್ಯದಂಗಳದಲ್ಲೇ ಒಡನಾಟವನ್ನಿಟ್ಟುಕೊಂಡಿದ್ದವರು. ೧೯೪೩ ರಲ್ಲಿ ಪ್ರಕಟವಾದ 'ಮೈಸೂರು ಮಲ್ಲಿಗೆ' ಕನ್ನಡ ಪ್ರೇಮ–ಕಾವ್ಯದಲ್ಲಿ ಅನನ್ಯವಾದುದು ಎಂಬುದು ನಿಜವಾದರೂ, ಇದರ ಮೊದಲ ಎಳೆಗಳು ಕಾಣಿಸಿಕೊಳ್ಳುವುದು ಆಚಾರ್ಯ ಬಿ.ಎಂ.ಶ್ರೀ ಅವರ ಇಂಗ್ಲಿಷ್ ಗೀತೆಗಳಲ್ಲಿ. ಈ ಐತಿಹಾಸಿಕ ಮಹತ್ವದ ಕೃತಿಯಲ್ಲಿ ಬರ್ನ್ಸ್ ಕವಿಯ ಕೆಲವು ಪ್ರೇಮಗೀತೆಗಳ ಅನುವಾದಗಳು, ಮೈಸೂರು ಮಲ್ಲಿಗೆಯ ಕವಿತೆಯ ಭಾಷೆ, ವಸ್ತು, ಲಯಗಳ

ಮೇಲೆ ಪ್ರಭಾವ ಬೀರಿದಂತಿದೆ. ಅದೇ ರೀತಿ ತೀ.ನಂ.ಶ್ರೀ. ಅವರ 'ಒಲುಮೆ' ಸಂಗ್ರಹದಲ್ಲಿನ (೧೯೩೨) ಕವಿತೆಗಳು ಕೆ.ಎಸ್.ನ. ಅವರನ್ನು ಪ್ರಭಾವಿಸಿದ ಹಾಗಿದೆ. 'ಮೈಸೂರು ಮಲ್ಲಿಗೆ'ಯ ಬಹಳಷ್ಟು ಕವಿತೆಗಳು ದಾಂಪತ್ಯ ಗೀತೆಗಳೇ ಆಗಿವೆ. ಸ್ವತಃ ಕೆ.ಎಸ್.ನ ಅವರೇ ತಮ್ಮವು ಪ್ರೇಮಗೀತೆಗಳಲ್ಲ, ದಾಂಪತ್ಯ ಗೀತೆಗಳೆಂದು ಹೇಳಿಕೊಂಡಿದ್ದಾರೆ. ಹೆಚ್ಚಾಗಿ ವಿವಾಹಪೂರ್ವ ಮತ್ತು ಹೊಸ ದಾಂಪತ್ಯ ಹರೆಯದ ಹೆಣ್ಣು-ಗಂಡುಗಳ ಒಲವು, ವಿರಹಗಳ ಸುಕುಮಾರ ಜಗತ್ತನ್ನು ಕನ್ನಡಕ್ಕೆ ತಂದು ಮನ್ನಣೆ ಗಳಿಸಿದವರು ಕೆ.ಎಸ್.ನ ಮಾತ್ರ ಎನ್ನಬೇಕು.

ದಶಕಗಳ ಹಿಂದಣ ಸಾವಧಾನದ ಬದುಕಿನ ಚಿತ್ರಣ ಈ ಸಂಕಲನದಲ್ಲಿದೆ. ಮಧ್ಯಮವರ್ಗ, ಕೆಳವರ್ಗದ ಸಮಾಜವೇ ಇಲ್ಲಿ ಕಾಣಿಸತಕ್ಕದ್ದು. ಹೆಚ್ಚಾಗಿ ಕವಿತೆಗಳ ಉದ್ದಕ್ಕೂ ಒಂದು ಗ್ರಾಮೀಣ ಪರಿಸರದ ಚಿತ್ರಣವಿದೆ. ನವಿಲೂರು, ಹೊನ್ನೂರು ಮೊದಲಾದುವು ಈ ಗ್ರಾಮೀಣ ಜಗತ್ತಿನ ಪ್ರಾತಿನಿಧಿಕ ನೆಲೆಗಳು. ಮೈಸೂರು ಮಲ್ಲಿಗೆಯ ಕವಿತೆಗಳು ಎಷ್ಟರಮಟ್ಟಿಗೆ ಈ ನೆಲದವಾಗಿವೆಯೆಂದರೆ, ಅವುಗಳ ಹಿಂದೆ ಬರ್ನ್ಸ್ ಕವಿಯ ಪ್ರಭಾವವಿದೆ ಎಂದು ಹೇಳಲಿಕ್ಕಾಗುವುದಿಲ್ಲ. ಈ ಕಾವ್ಯದಲ್ಲಿ ಸರಳತೆ, ಸ್ವಾಭಾವಿಕತೆಗಳು ಅಷ್ಟರ ಮಟ್ಟಿಗೆ ಮನೆಮಾಡಿವೆ. ಒಟ್ಟಾರೆ, ನಮ್ಮಲ್ಲೇ ಇದ್ದ ಜಾನಪದ ಕಾವ್ಯ ಮತ್ತು ಪಾಶ್ಚಾತ್ಯ ಪ್ರೇಮ ಕಾವ್ಯದ ಪ್ರಭಾವದಿಂದ ವಿಶಿಷ್ಟವಾದ ಈ ಮಣ್ಣಿನ ಮಲ್ಲಿಗೆಯ ವಾಸನೆ ಕೊಡುವ ಚೆಲುವಾದ ಕವಿತೆಯನ್ನು ಕೆ.ಎಸ್.ನ ನಿರ್ಮಿಸಿದವರು ಎನ್ನಬಹುದು. ಸರಳ ಜೀವನ ನಡೆಸಿದ ಕವಿವರ್ಯರು ತಮ್ಮ ಕಾವ್ಯಗಳಲ್ಲೂ ಸರಳತೆಯನ್ನೇ ತುಂಬಿದರು. ಶ್ರೀಸಾಮಾನ್ಯನಿಗೆ ನಿಲುಕುವ ಭಾಷೆಯನ್ನೇ ಅಸ್ತ್ರವನ್ನಾಗಿ ಬಳಸಿಕೊಂಡು, ತನ್ನ ಕಾವ್ಯ ಬಹುಜನರ ನಿರೀಕ್ಷೆಯನ್ನು ಮುಟ್ಟಬೇಕೆಂದು ನಿರಂತರ ಶ್ರಮದಿಂದ ಸೃಷ್ಟಿಸಿದ ಅವರ ಸಾಹಿತ್ಯ ನಿಜಕ್ಕೂ ಇಂದು ಎಲ್ಲರ ಮನಸ್ಸಲ್ಲೂ ಗುನುಗುವಂತಾಗಿದೆ.

ಕೆ.ಎಸ್.ನ ಅವರ "ಮೈಸೂರು ಮಲ್ಲಿಗೆ"ಯನ್ನು ತಂಗಾಳಿಗೊಡ್ಡಿದ ನರಸಿಂಹಸ್ವಾಮಿ-ಯವರ ಪ್ರತಿಭೆ ಅಪ್ಸರೆಯಂತೆ, ಈ ಲಾವಣ್ಯವು ಮಣ್ಣ ನೆಲದಿಂದ ಬಂದುದಲ್ಲ ಎನಿಸಿಬಿಟ್ಟಿದೆ" ಎಂದು ಕವಿವರ್ಯ ದ.ರಾ. ಬೇಂದ್ರೆಯವರೂ, "ಮೈಸೂರು ಮಲ್ಲಿಗೆ" ಕಸ್ತೂರಿಯ ನೆಲದಲ್ಲಿ ಕಾಮನಬಿಲ್ಲನ್ನು ಬಿತ್ತಿ ಬೆಳೆಯಿಸಿದ ಹೂದೋಟ" ಎಂದು ಪಂಡಿತೋತ್ತಮರಾದ ಡಿ.ಎಲ್. ನರಸಿಂಹಾಚಾರ್ಯರೂ ಪ್ರಶಂಸಿಸಿದ್ದಾರೆ. ಕೆ.ಎಸ್.ನ ಅವರು ತಮ್ಮ ಕವನಗಳನ್ನುದ್ದೇಶಿಸಿ 'ಇರುವಂತಿಗೆ'ಯ (ಪುಟ. ೦೭) ಮುನ್ನುಡಿಯಲ್ಲಿ ಹೀಗೆ ಹೇಳುತ್ತಾರೆ. "ನನ್ನೊಬ್ಬನ ಸಂತೋಷಕ್ಕಾಗಿ ನಾನು ಕವಿತೆ ಕಟ್ಟುತ್ತಿಲ್ಲ; ಅಷ್ಟೆ ಆಗಿದ್ದರೆ, ಬರೆದ ಹೊರೆಯನ್ನು ಬಚ್ಚಿಡಲು ನನ್ನ ಮನೆಯಲ್ಲಿ ಸಾಕಷ್ಟು ಸ್ಥಳವಿತ್ತು. ಇದನ್ನು ಅಚ್ಚಿನ ಮನೆಗೆ ದಬ್ಬುವ ಪ್ರಮೇಯವಿರಲಿಲ್ಲ. ಆದರೆ, ಜನತೆಯಲ್ಲಿ ಸೇರಿಕೊಂಡು ಅವರಿಂದ ಪಿರಿದ ಸಂಪತ್ತನ್ನು ಹಾಗೆ ಪಗೇವಿನಲ್ಲಿ

ಮುಚ್ಚಿಡುವುದು ಕೃತಜ್ಞತೆಯ ಕುರುಹಲ್ಲ. ಕವಿತೆ ಕೂಡ ಕಟ್ಟುವ ತನಕ ಕವಿಯ ಅಧೀನ; ಕಟ್ಟಿದ ಮೇಲೆ 'ಗಂಡನ ಮನೆಗೆ ಕಳಿಸಿಕೊಟ್ಟ ಮಗಳಂತೆ' ಪರಾಧೀನ ಬಿಟ್ಟು ಬಾಳುವುದೇ ಇಲ್ಲಿ ಸ್ನೇಹ" ಎಂದಿದ್ದಾರೆ.

'ಮೈಸೂರು ಮಲ್ಲಿಗೆ' ದಾಂಪತ್ಯ ಪ್ರೇಮವನ್ನು ವಸ್ತುವಾಗಿಟ್ಟುಕೊಂಡು ರಚಿತವಾದ ಕಾವ್ಯವಾಗಿರುವುದರಿಂದ ಅದನ್ನೇ ಹೆಚ್ಚಾಗಿ ಇಲ್ಲಿ ಪ್ರಧಾನವಾಗಿಟ್ಟುಕೊಳ್ಳಲಾಗಿದೆ. ಈ ಕಾವ್ಯದಲ್ಲಿನ ಬಹುಮಟ್ಟಿನ ಕವನಗಳು ಮದುವೆಯಾದ ತರುಣರಲ್ಲಿನ ಸರಸ ಸನ್ನಿವೇಶಗಳನ್ನು, ನವದಂಪತಿಗಳ ಪ್ರೇಮ ಜೀವನದ ಬೆಡಗನ್ನು ಕುರಿತಂತಹವು. ಜೀವನದಲ್ಲಿ ದಾಂಪತ್ಯದ ಹೊಸಜೀವನ ವಸಂತಕಾಲವಿದ್ದಂತೆ; ಹೃದಯ ಹೃದಯಗಳು ಒಂದುಗೂಡಿ ನವಜೀವನವನ್ನು ಪಡೆಯುವ ಕಾಲ. ಅಂತಹ ಚೆಲುವನ್ನು ತಮ್ಮ ಕವನಗಳಲ್ಲಿ ಮೂಡಿಸಲು ನರಸಿಂಹಸ್ವಾಮಿಯವರು ಯತ್ನಿಸಿದ್ದಾರೆ.

"ಒಂದು ಹೆಣ್ಣಿಗೊಂದು ಗಂಡು
ಹೇಗೋ ಸೇರಿ ಹೊಂದಿಕೊಂಡು
ಕಾಣದೊಂದು ಕನಸು ಕಂಡು
ಮಾತಿಗೊಲಿಯದಮೃತವುಂಡು
ದುಃಖ ಹಗುರವೆನುತಿವೆ
ಪ್ರೇಮವೆನಲು ಹಾಸ್ಯವೆ?"

(ಮೈ. ಮ. 'ಬಾರೆ ನನ್ನ ಶಾರದೆ'. ಮ.ಮು. ೨೦೧೧, ಪುಟ ೨೧)

ನಮ್ಮ ಹಿರಿಯರು ಹೇಳುವಂತೆ, ಒಂದು ಹೆಣ್ಣಿಗೆ ಒಂದು ಗಂಡು ಈ ಜಗತ್ತಿನಲ್ಲಿ ಇದ್ದೇ ಇರುತ್ತಾನೆ. ಅದು ಆ ದೈವದ ಸೃಷ್ಟಿ ಎಂಬುದು ಅವರ ನಂಬಿಕೆ. ಅದೇ ರೀತಿ ಈ ಪದ್ಯದ ಸಾಲುಗಳಲ್ಲಿ ಎಲ್ಲಿಯೋ ಹುಟ್ಟಿ ಎಲ್ಲಿಯೋ ಬೆಳೆದ ಗಂಡು-ಹೆಣ್ಣಿನ ಸಮಾಗಮ, ಅವರು ಕಂಡ ಕನಸು, ಪ್ರೀತಿ, ಸುಖ-ದುಃಖ ಎಲ್ಲವೂ ಬೆರೆತಿದೆ ಎಂದರೆ, ಅಲ್ಲಿ ಪ್ರೇಮ ಅಮೃತದ ಸಮಾನವೇ ನಿಜ. ಅದನ್ನು ಪರಿಹಾಸ್ಯ ಮಾಡಿ ಅಲ್ಲಗಳೆಯುವಂತಿಲ್ಲ. ಕವಿ ಕೆ.ಎಸ್.ನ ಅವರು ಪ್ರೀತಿ ಪ್ರೇಮದ ಬಗ್ಗೆ ಇದಕ್ಕಿಂತ ಸರಳವಾಗಿ, ಹೃದಯಸ್ಪರ್ಶಿಯಾಗಿ ಬರೆಯುವುದು ಸಾಧ್ಯವೆ ಇಲ್ಲವೇನೋ ಎನ್ನುವಷ್ಟರ ಮಟ್ಟಿಗೆ ಮನಮುಟ್ಟುವಂತೆ ರಚಿಸಿದ್ದಾರೆ. ಬದುಕಿನುದ್ದಕ್ಕೂ ಪ್ರತಿಕೂಲ ಪರಿಸ್ಥಿತಿಯಲ್ಲೇ ಹೋರಾಟ ನಡೆಸುತ್ತಾ ಬಂದರೂ ತಮ್ಮ ನೋವನ್ನು ನುಂಗಿ ನಲಿವನ್ನು ಮಾತ್ರ ಜನತೆಗೆ ನೀಡಿದರು.

'ನೊಂದ ನೋವನ್ನಷ್ಟೆ ಹಾಡಲೇಬೇಕೇನು?
ಬೇಡವೇ ಯಾರಿಗೂ ಸಿರಿಮಲ್ಲಿಗೆ?

(ಮಲ್ಲಿಗೆಯ ಮಾಲೆ, ಪು. ೬೪೨)

ಈ ಸಾಲುಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ, ನಿಜಕ್ಕೂ ನಮಗೆ ಅವರ ಹೃದಯ ಶ್ರೀಮಂತಿಕೆ ಅರಿವಾಗುತ್ತದೆ. ನಮ್ಮ ಸಮಾಜ ಒಪ್ಪಿತವಾದ ಕೌಟುಂಬಿಕ ನೆಲೆಯಲ್ಲೇ ಪ್ರೇಮ ಅರಳಬೇಕೆನ್ನುವ ದೃಷ್ಟಿಯಿಂದಲೇ ರಚಿತವಾದ ಅವರ 'ಮೈಸೂರು ಮಲ್ಲಿಗೆ' ಸಂಕಲನದಲ್ಲಿ ನವ ವಿವಾಹಿತರ ನವಿರು ಭಾವನೆಗಳನ್ನು ದಾಖಲಿಸುತ್ತಾ ಪ್ರೇಮ–ಮಿಲನ–ದಾಂಪತ್ಯಗಳ ಲೋಕವನ್ನು ಜನಸಾಮಾನ್ಯರೂ ಸಹ ಓದಿ ಅರಗಿಸಿಕೊಳ್ಳುವ ರೀತಿಯಲ್ಲಿ ತೆರೆದಿಟ್ಟರು.

'ಹಳ್ಳಿಯ ಚೆಲುವೆಗೆ' ಎಂಬ ಪ್ರೇಮಗೀತೆಯಲ್ಲಿ ವಿವಾಹಕ್ಕೆ ಸಜ್ಜಾಗಿರುವ ಚೆಲುವೆಯ ವರ್ಣನೆ ಅಮೋಘವಾಗಿ ಮೂಡಿಬಂದಿದೆ.

'ನವಿಲೂರಿನೊಳಗೆಲ್ಲ ನೀನೆ ಬಲು ಚೆಲುವೆ!
ಅದಕೆ ನಮ್ಮಿಬ್ಬರಿಗೆ ನಾಳೆಯೇ ಮದುವೆ!'

(ಮೈಸೂರು ಮಲ್ಲಿಗೆ, ಪುಟ, ೧೯)

ತನ್ನವಳ ಚೆಲುವನ್ನು ವರ್ಣಿಸುವ ಮಧುಮಗ ತನ್ನ ಬಾಳ ಸಂಗಾತಿಯನ್ನು ಒಪ್ಪಿರುವ ಊರಿಗೆಲ್ಲಾ ಚೆಲುವಾಗಿರುವವಳನ್ನು ವರಿಸುವ, ಸಂಬೋಧನೆ ಈ ಕವನದಲ್ಲಿ ಅಭಿವ್ಯಕ್ತಿಸಿದೆ. "ನಂಬಿ ನನ್ನನು ವರಿಸಿ ಸಂತಸದಿ ಬಾಳು ನವಿಲೂರಿಗೆಲ್ಲಾ ......" ಎನ್ನುವ ಅವನ ಮಾತುಗಳು ಕಷ್ಟಪಟ್ಟು ದುಡಿದು ಅವಳನ್ನು ಸಂತಸವಾಗಿಡುವೆವೆಂಬ ಆಶ್ವಾಸನೆಯನ್ನು ಅವಳಿಗೆ ನೀಡಿದಂತಿದೆ. ಇದಕ್ಕೆ ಪ್ರತಿಯಾಗಿ "ಪ್ರೀತಿಯೊಂದನೆ ನಿನ್ನ ಕೇಳುವುದ ನಾನು" ಎನ್ನುವ ಅವನ ನುಡಿಗಳು ಸರಳತೆಗೆ ಸ್ವಾಭಾವಿಕತೆಗೆ ಈ ಕವನ ಸಾಕ್ಷಿಯಾಗಿದೆ.

ಬಾಳ ಪಯಣದಲ್ಲಿ ತನ್ನನ್ನು ವರಿಸಿದ ಗಂಡ ಏನೇ ಆಶ್ವಾಸನೆ, ಭರವಸೆಗಳನ್ನು ನೀಡಿದ್ದರೂ ಆಗ ತಾನೇ ಮದುವೆಯಾಗಿ ಗಂಡನ ಮನೆಗೆ ಕಾಲಿಟ್ಟ ಹೆಣ್ಣಿನ ಸಂಕೀರ್ಣ ಮನಸ್ಥಿತಿ ಆ ಅಪರಿಚಿತ ವಾತಾವರಣವನ್ನು ಒಪ್ಪಿಕೊಳ್ಳುವುದು ಕಷ್ಟ. ಆದರೆ, ದಿನ ಕಳೆದಂತೆ, ಆ ಪರಿಸರಕ್ಕೆ ತಾನಾಗೇ ಹೊಂದಿಕೊಳ್ಳುವ ಹೆಣ್ಣಿನ ಆತ್ಮವಿಶ್ವಾಸವನ್ನು, ಅವಳಲ್ಲಾಗುವ ಪರಿವರ್ತನೆಯನ್ನು ಅವರ 'ಉಂಗುರ' ಕವನದಲ್ಲಿ ಮನಮೋಹಕವಾಗಿ ಚಿತ್ರಿಸಿದ್ದಾರೆ.

"ಮೊದಲ ದಿನ ಮೌನ ಅಳುವೇ ತುಟಿಗೆ ಬಂದಂತೆ
ಚಿಂತೆ ಬಿಡಿ ಹೂವ ಮುಡಿದಂತೆ
ಹತ್ತು ಕಡೆ ಕಣ್ಣು ಸಣ್ಣಗೆ ದೀಪ ಉರಿದಂತೆ;
ಜೀವದಲಿ ಜಾತ್ರೆ ಮುಗಿದಂತೆ
ಎರಡನೆಯ ಹಗಲು ಇಳಿಮುಖವಿಲ್ಲ ಇಷ್ಟು ನಗು
ಮೂಗುತಿಯ ಮಿಂಚು ಒಳ–ಹೊರಗೆ;

ನೀರೊಳಗೆ ವೀಣೆ ಮಿಡಿದಂತೆ ಆಡಿದ ಮಾತು,
ಬೇಲಿಯಲಿ ಹಾವು ಹರಿದಂತೆ"

(ಉಂಗುರ, ಕೆ.ಎಸ್.ನ, ಕಾವ್ಯಾಲಯ ಪ್ರಕಾಶನ ಪುಟ. ೩೬)

ಮೊದಲ ದಿನ ತುಟಿಗೆ ಬಂದ ಅಳುವನ್ನು ತಡೆಹಿಡಿದ ವಧು ತನ್ನ ತವರಿನಿಂದ ಬೇರ್ಪಟ್ಟು ಏಕಾಕಿಯಾಗಿ ನಿಂತ ಧ್ವನಿ 'ಬಿಡಿ ಹೂ' ರೀತಿ ಇದೆ. ಹತ್ತು ಕಡೆಯೂ ಆತಂಕದಿಂದ ತವಕಿಸುತ್ತಿದ್ದ ಅವಳ ಕಣ್ಣುಗಳು ಹೇಗೆ ನಡೆದರೆ ಏನಾಗುತ್ತದೆಂಬ ಭಾವ ಹೊರಹೊಮ್ಮಿದೆ. ಎರಡನೆಯ ದಿವಸ ಮೌನ ಮುರಿದು ಆತಂಕವಿದ್ದರೂ ತನ್ನ ಜವಾಬ್ದಾರಿಯನ್ನು ನಿಭಾಯಿಸಬಲ್ಲೆನೆಂಬ ವಿಶ್ವಾಸದಲ್ಲಿ 'ನೀರೊಳಗೆ ವೀಣೆ ಮಿಡಿದಂತೆ' ಹೊಸ ವಾತಾವರಣಕ್ಕೆ ಹೊಂದಿಕೊಳ್ಳುವ ಚಿತ್ರಣವಿದೆ. 'ಮೂರನೆಯ ಸಂಜೆ ಹೆರಳಿನ ತುಂಬ ದಂಡೆ ಹೂ ಹೂವಿಗೂ ಜೀವ ಬಂದಂತೆ' ಆ ಮನೆಗೆ ಹಳಬಳಾಗಿ ಉತ್ಸಾಹದಿಂದ ಪುಟಿಯುತ್ತಾಳೆ. ಹೀಗೆ ಹೊಸದಾಗಿ ಮನೆಗೆ ಬಂದ ವಧುವಿನ ಸ್ಥಿತಿಯನ್ನು ಮೂರು ಮಜಲುಗಳಲ್ಲಿ ತುಂಬಾ ಸೊಗಸಾಗಿ ನಿರೂಪಿಸಿದ್ದಾರೆ.

ಕೆ.ಎಸ್.ನ ಅವರ 'ಬಾರೆ ನನ್ನ ಶಾರದೆ' ಎಂಬ ಕವನದಲ್ಲಿ ನಲ್ಲ–ನಲ್ಲೆಯರ ಹೊಸ ಭಾವನೆಗಳು ಹೇಗೆ ಆರಂಭವಾಗುತ್ತವೆ? ದಾಂಪತ್ಯದ ಸವಿ ಆರಂಭದಲ್ಲಿ ಹೇಗಿರುತ್ತದೆ ಎಂಬುದನ್ನು ತಿಳಿಸುತ್ತದೆ.

"ಮದುವೆಯಾಗಿ ತಿಂಗಳಿಲ್ಲ
ನೋಡಿರಣ್ಣ ಹೇಗಿದೆ
ನಾನು ಕೂಗಿದಾಗಲೆಲ್ಲ
ಬರುವಳೆನ್ನ ಶಾರದೆ!
ಹಿಂದೆ ಮುಂದೆ ನೋಡದೆ
ಎದುರು ಮಾತನಾಡದೆ!"

ನವದಂಪತಿಗಳ ಸುಂದರ ಜೀವನದ ಮಾದರಿಯಾಗಿ ಈ ಕವನ ಬಂದಿದೆ. ಸಾಂಸಾರಿಕ ವಲಯದೊಳಗೇ ಸಂತೋಷದ ಎಲ್ಲೆ ದಾಟದೆ, ಔಚಿತ್ಯದ ಹದ ಮೀರದೆ, ಶೃಂಗಾರವನ್ನು ತರುವುದು ಕವಿಯ ಉದ್ದೇಶ. ಆದ್ದರಿಂದ ಜೀವನದ ಚೆಲುವಾದ ಮುಖವನ್ನೇ ಮೈಸೂರು ಮಲ್ಲಿಗೆಯ ಹೆಚ್ಚಿನ ಕವನಗಳು ಚಿತ್ರಿಸುತ್ತವೆ.

"ಪಗಡೆಯಾಡಬಾರದೆ
ನಾನು ನನ್ನ ಶಾರದೆ"

ಎನ್ನುವ ಮಾತುಗಳಲ್ಲಿ ಸಾಮಾಜಿಕ ನೀತಿ–ನಿಯಮಗಳನ್ನು ಒಪ್ಪುತ್ತಲೇ ಪ್ರೀತಿಯ ಹಕ್ಕನ್ನು, ಸಮಾನತೆಯನ್ನು ಇಬ್ಬರಲ್ಲೂ ಕಾಣುವ ಮನೋಭಾವ ಇಲ್ಲಿದೆ. ನವಜೋಡಿಯ ಸುಂದರ ಬದುಕಿನ ಮಾದರಿಯನ್ನು ಅವರ ಮತ್ತೊಂದು ಕವಿತೆ 'ಗೃಹಲಕ್ಷ್ಮಿ'ಯಲ್ಲಿ ತುಂಬ ನಯವಾಗಿ ತಂದಿದ್ದಾರೆ.

"ನನ್ನವಳು ನನ್ನೆದೆಯ ಹೊನ್ನಾಡನಾಳುವಳು
ಬೆಳಗು ಚೆನ್ನೆಯ ಚೆನ್ನೆ ನನ್ನ ಮಡದಿ;
ಹೊಳೆಯ ಸುಳಿಗಳಿಗಿಂತ ಆಳ ಕಣ್ಣಿನ ಚೆಲುವು
.....................................................
ಕಳೆದಾಗ ತೌರುಮನೆ–ನೆನದಾಗ ನನ್ನ ಮನೆ
ಹಳ್ಳಿಯೆರಡರ ಮುದ್ದು ಬಳ್ಳಿಯಿವಳು"

ಈ ಕವಿತೆಯಲ್ಲಿ 'ನನ್ನವಳು' ಎನ್ನುವ ಮಾತಿನಲ್ಲೇ ತನ್ನ ಹೃದಯದಲ್ಲಿ ಅವಳಿಗೆ ನೀಡಿರುವ ಸ್ಥಾನ ಎಂತಹುದೆಂಬುದು ಅರಿವಾಗುತ್ತದೆ. ತನ್ನ ಮಡದಿಯ ಕಣ್ಣುಗಳು ಹೊಳೆಯ ಸುಳಿಗಳಿಗಿಂತ ಆಳವೆನ್ನುವ ಆತನ ಕಲ್ಪನೆ ತುಂಬಾ ವಿನೂತನವಾದುದು. 'ಕಳೆದಾಗ ತೌರುಮನೆ ನೆನೆಗಾದ ನನ್ನ ಮನೆ' ಎಂಬ ಮಾತು ನನ್ನ ಅವಳ ಬಾಂಧವ್ಯದಂತೆ ಎರಡೂ ಊರುಗಳ ಸಂಬಂಧವೂ ಗಟ್ಟಿಯಾಗಿ ನಿಲ್ಲುತ್ತದೆ. ಹಾಗೆಯೇ ಅಲ್ಪಕಾಲದ ವಿರಹ, ಹುಸಿಮುನಿಸು, ನಂತರದ ಭೇಟಿ ಇತ್ಯಾದಿ ಸಂದರ್ಭಗಳನ್ನು ಹೋಲುವ ಇವರ ಕವನಗಳು ಗಂಡ–ಹೆಂಡಿರ ನವಿರಾದ ಹಾಸ್ಯ ತುಂಟತನ ಮತ್ತಷ್ಟು ಹತ್ತಿರ ಸೆಳೆಯುವ ಅವರ ಬಯಕೆ ಎಲ್ಲವೂ ದಾಂಪತ್ಯವನ್ನು ಜೀವಂತವಾಗಿಡಲು ಸಹಕಾರಿಯಾಗುತ್ತದೆ ಎಂಬುದನ್ನು ತಿಳಿಸುತ್ತದೆ.

ಒಂದಿರುಳು ಕನಸಿನಲ್ಲಿ ತನ್ನ ಇನಿಯಳನ್ನು 'ನಮ್ಮೂರು ಚೆಂದವೋ, ನಿಮ್ಮೂರು ಚೆಂದವೋ' ಎಂದು ಇನಿಯ ಕೇಳಿದಾಗ ಗಂಡನಿಗೆ ಬೇಸರವಾಗದಂತೆ, 'ಎನ್ನರಸ ಸುಮ್ಮನಿರಿ' ಎಂದು ನಾಚಿಕೊಳ್ಳುವ ಆಕೆಯ ಉತ್ತರದಲ್ಲಿ ಗಂಡನ ಮನವನ್ನು ಗೆದ್ದಂತೆ, ತವರಿನ ಗೌರವ ಉಳಿದಂತೆ ಇರುತ್ತದೆ. ಊರಿಗೆ ಹೋಗುವಾಗ ತನ್ನ ನಲ್ಲೆಗೆ ಇನ್ನೊಂದು ತಿಂಗಳಿಗೆ ಬರುತ್ತೇನೆಂದು ಹೇಳಿ, ಅವಳನ್ನು ಬಿಟ್ಟು ಹೋಗಲಾರದೇ ಹೋಗುವಾಗ ದಾರಿಯಲ್ಲಿ ಹಣ್ಣು ಮಾರುವವನೊಬ್ಬ 'ಹೊರಟು ಹೋದುದು ಬಂಡಿ' ಎಂಬ ಮಾತು ಕೇಳಿ ವಿಧಿಯಿಲ್ಲದೆ ಹಿಂದಿರುಗಿದ ಗಂಡನನ್ನು ನೋಡಿ 'ತಿಂಗಳಾಯಿತೆ?' ಎಂದು ಹೆಂಡತಿ ಕುಚೋದ್ಯ ಮಾಡುವುದು ತುಂಬಾ ನವಿರಾಗಿ ಮೂಡಿ ಬಂದಿದೆ. ಮೇಲ್ನೋಟಕ್ಕೆ ಯಾವ ಗಹನವಾದ ವಿಚಾರವೂ ಇಲ್ಲಿ ಕಾಣುವುದಿಲ್ಲವಾದರೂ, ಕವನವನ್ನು ಓದಿದಾಗ, ಕೇಳಿದಾಗ ನಿಮ್ಮ ಹೃದಯ ಆನಂದದಿಂದ ತುಂಬಿಬರುತ್ತದೆ. ಇದಕ್ಕೆ ಕಾರಣವಿಷ್ಟೆ. ಒಂದಲ್ಲ ಒಂದು ಕಾಲದಲ್ಲಿ

ಪ್ರತಿಯೊಬ್ಬರೂ ಆ ನಾಲ್ಕು ದಿನದ ಸೊಬಗನ್ನು ಸವಿದವರೇ ಮತ್ತು ಸವಿಯಬಯಸುವವರೇ. ಇಂತಹ ಪ್ರಸಂಗಗಳು ಎಲ್ಲರ ಜೀವನದಲ್ಲೂ ಖುಷಿ ಕೊಡುವ ಸಂದರ್ಭವೇ ಆಗಿವೆ.

ಮೈಸೂರು ಮಲ್ಲಿಗೆಯ ಕವನಗಳು ಮಲ್ಲಿಗೆಯಂತೆಯೇ ಸಹಜ ಸುಂದರ ಹಾಗೂ ಕೋಮಲವಾದುವು. ಇಲ್ಲಿನ ಕಾವ್ಯದ ಭಾಷೆ ಆಡುಮಾತಿಗೆ ಹತ್ತಿರವಾಗಿ ಗದ್ಯದಂತೆ ಕಂಡರೂ ಗದ್ಯದ ಕಡೆಗೆ ವಾಲದೇ ಪದ್ಯವಾಗಿಯೇ ಉಳಿಯುತ್ತದೆ. ಸಾಮಾನ್ಯ ವಿಷಯಗಳು ಸಹ ಕುತೂಹಲಭರಿತವಾಗುತ್ತವೆ. ಇದಕ್ಕೆ 'ರಾಯರು ಬಂದರು ಮಾವನ ಮನೆಗೆ' ಕವನವೇ ಉತ್ತಮ ಉದಾಹರಣೆ. ಮಾವನ ಮನೆಗೆ ಬರುವ ಅಳಿಯನನ್ನು 'ರಾಯರು' ಎಂದು ಕರೆಯುವಲ್ಲಿಯೇ ಗೌರವದ ವಾತಾವರಣ ಸೃಷ್ಟಿಯಾಗಿಬಿಡುತ್ತದೆ. ಮಾವನ ಮನೆಗೆ ಬಂದ ಅಳಿಯನನ್ನು ಯಾವುದೇ ಕುಂದುಕೊರತೆ ಇಲ್ಲದೇ ಉಪಚರಿಸುವುದು ಸಾಮಾನ್ಯವಾಗಿ ನಮ್ಮ ಸಂಸ್ಕೃತಿ. ಈ ಕವಿತೆಯಲ್ಲೂ ಹಾಗೆಯೇ ಮನೆಗೆ ಬಂದ ರಾಯರಿಗೆ ಹಂತ ಹಂತವಾಗಿ ಉಪಚಾರ ಮಾಡಿದರೂ ಹೆಂಡತಿಯ ಬಳೆಗಳ ಸದ್ದು ಕೇಳದೇ ಹತಾಶರಾಗುತ್ತಾರೆ. ತನ್ನ ಹೆಂಡತಿ ಪದುಮಳು ಎಲ್ಲೆಂದು ಇವರು ಕೇಳಲಿಲ್ಲ. ಮಾವ ಹೇಳಲಿಲ್ಲ. ಕೊನೆಗೆ ತಾಂಬೂಲ ತರಬೇಕಾದರೂ ಪದುಮಳ ಸುಳಿವಿಲ್ಲದ್ದನ್ನು ನೋಡಿ ನಾದಿನಿಗೆ 'ಅಕ್ಕನ ಕರೆಯಮ್ಮ' ಎಂದು ಬಿಟ್ಟರು. 'ಪದುಮಳು ಒಳಗಿಲ್ಲ' ಎಂದು ನಕ್ಕುಬಿಟ್ಟಳು ನಾದಿನಿ. ಇಲ್ಲಿ ಕೊಂಚ ರಾಯರಿಗೆ ಮುಜುಗರವೆನಿಸಿದರೂ ಪದುಮಳೂ ಇಲ್ಲದ್ದಕ್ಕೆ ಬೇಸರ. ಭಾವನ ಪೇಚಾಟ ಕಂಡು ನಾದಿನಿ ನಕ್ಕರೂ 'ರಾಯರು ನಗಲಿಲ್ಲ' ಎಂಬ ಮಾತು ಅವರಿಗಾದ ನಿರಾಸೆ ಎದ್ದು ಕಾಣುತ್ತದೆ. ಆ 'ನಿರಾಸೆ'ಯಿಂದಲೇ ಹೊರಟು ನಿಂತ ರಾಯರಿಗೆ 'ನೀರಾಯಿತು' ಎಂದು ನಾದಿನಿ ರಾಗವಾಗಿ ಹೇಳಿದ ಮಾತು ಅವರಿಗೆ ಹರುಷ ಉಕ್ಕಿಸುತ್ತದೆ. ನಂತರ 'ಪದುಮಳು ಬಂದಳು ಹೂವನ ಮುಡಿಯುತ ರಾಯರ ಕೋಣೆಯಲಿ' ಎಂಬ ಸಾಲುಗಳು ಸಾಂಪ್ರದಾಯಕ ಚೌಕಟ್ಟಿನಲ್ಲಿ ಬೆಳೆದ ಹೆಣ್ಣು ಮಕ್ಕಳು ಗಂಡನ ಕೋಣೆಗೆ ಹೋಗುವಾಗ ಲಜ್ಜೆಯಿಂದ ಹೂವನ್ನು ಮುಡಿದು ಹೋಗುವ ಸಂಸ್ಕೃತಿ ಎದ್ದು ತೋರುತ್ತದೆ. ಇಲ್ಲಿ 'ನೀರಾಯಿತು', 'ಕಣ್ಣನು ಕಡಿದರು ನಿದ್ದೆಯು ಬಾರದು', ಎಂಬ ಮಾತುಗಳು ನುಡಿಗಟ್ಟಿನಂತೆ ಬರುತ್ತವೆ. ಎಲ್ಲಿಯೂ ಅಶ್ಲೀಲಕ್ಕೆಡೆ ಕೊಡದೆ ನಮ್ಮನ್ನು ಭಾವನಾ ಪ್ರಪಂಚದಲ್ಲಿ ವಿಹರಿಸುವಂತೆ ಮಾಡುವ ಈ ಕಾವ್ಯ ಇಂದಿಗೂ ಸಹ ಪ್ರೇಮಿಗಳ, ನವದಂಪತಿಗಳ ರಸಿಕರ ಬಾಯಲ್ಲಿ ನಲಿಯುತ್ತಿರುತ್ತದೆ.

ದಾಂಪತ್ಯದ ಹಾದಿಯಲ್ಲಿ ಆತಂಕ, ಅಡಚಣೆಗಳು ಸಾಮಾನ್ಯ. ಅದು ಎಲ್ಲರಿಗೂ ತಿಳಿದಿರುವ ವಿಷಯವೇ ಆದರೂ, ಕೆ.ಎಸ್.ನ ರವರ ಕಾವ್ಯಗಳಲ್ಲಿ ಅದು ವಿಭಿನ್ನ. ಹೇಳುವ ಮಾತಿನಲ್ಲೇ ಆತಂಕದ ಪ್ರಶ್ನೆಗೆ ನವಿರಾದ ಸರಳ ಮೋಹಕವಾದ ಉತ್ತರ ನೀಡುವುದು

ಎಲ್ಲರಿಗೂ ಸಾಧ್ಯವಿಲ್ಲ. ಹೆತ್ತವರ ಆತಂಕವನ್ನು ನೀಗುವ ಅಳಿಯನ ಸವಿನಯ ಉತ್ತರ 'ಒಬ್ಬಳೇ ಮಗಳು' ಕವನದಲ್ಲಿ ಅತ್ಯದ್ಭುತವಾಗಿದೆ.

'ಒಬ್ಬಳೇ ಮಗಳೆಂದು ನೀವೇಕೆ ಕೊರಗುವಿರಿ!
ಒಬ್ಬಳೇ ಮಡದಿಯೆನಗೆ!
ಹಬ್ಬದೂಟದ ನಡುವೆ ಕಣ್ಣೀರ ಸುರಿಸದಿರಿ;
ಸುಮ್ಮನಿರಿ ಮಾವನವರೇ' (ಮೈಸೂರು ಮಲ್ಲಿಗೆ, ಪು. ೨೦)

ಈ ಮಾತುಗಳು ಸಾಮಾನ್ಯ ಎನಿಸಿದರೂ, 'ಒಬ್ಬಳೇ ಮಡದಿಯೆನಗೆ' ಎನ್ನುವ ಮಾತು ಹೆಣ್ಣನ್ನು ಹೆತ್ತವರ ಆತಂಕವನ್ನು ನೀಗಿಸುತ್ತದೆ. ಒಬ್ಬಳೇ ಮಗಳನ್ನು ತಾವು ಹೇಗೆ ಜೋಪಾನ ಮಾಡಿದೆವೋ ಹಾಗೆ ಒಬ್ಬಳೇ ಮಡದಿಯನು ಜೋಪಾನ ಮಾಡುವೆನೆಂಬ ಭರವಸೆ ತೋರುತ್ತದೆ. ನಿಜಕ್ಕೂ ಇಲ್ಲಿ 'ಒಬ್ಬಳೇ ಮಗಳು' ಎಂಬುದು ಸಹಜ. ಆದರೆ, 'ಒಬ್ಬಳೇ ಮಡದಿ' ಎನ್ನುವುದೇ ವಿಶೇಷ. "ನನಗೇನು ಹತ್ತಾರು ಹೆಂಡತಿಯರಿದ್ದಾರೆಯೇ? ನನಗೂ ಒಬ್ಬಳೇ ಮಡದಿ"; ಎಂಬ ಮಾತಿನಲ್ಲಿ ಚಮತ್ಕಾರವಿದೆ.

'ಅಕ್ಕರೆಯ ದನಿಯಾಕೆ', ಹೂವಾಡಗಿತ್ತಿ', 'ನಾಳೆ ಬರುವಳು ಗೌರಿ' ಮತ್ತಿತರ ಕೆಲವು ಕವನಗಳು ವಿರಹವನ್ನು ಕುರಿತಂತಹವು. ಆದರೆ, ಇವುಗಳನ್ನು ಓದುವಾಗ ನಿಜಕ್ಕೂ ನಾವು ವಿರಹಗೀತೆಯನ್ನೋದುತ್ತಿದ್ದಂತೆ ಅನಿಸುವುದಿಲ್ಲ. ಇಂತಹ ಒಂದು ಸನ್ನಿವೇಶ 'ಬಳೆಗಾರನ ಹಾಡು' ಕವನದಲ್ಲಿದೆ. ಮಾವನ ಮೇಲಿನ ಕೋಪದಿಂದ ತನ್ನ ಬಸುರಿ ಹೆಂಡತಿಯನ್ನು ನೋಡಲು ಪತಿರಾಯ ಹೋಗಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಬಳೆಗಾರನ ಮೂಲಕ ತನ್ನ ನೋವನ್ನು ಗಂಡನಿಗೆ ತಿಳಿಸುವ ರೀತಿ ಒಂದು ವಿಭಿನ್ನ ಪ್ರಯತ್ನ. ಅದೇ ರೀತಿ 'ಹೆಂಡತಿಯ ಕಾಗದ' ಎಂಬ ಕವನದಲ್ಲಿ ವಿರಹದ ತಾಪ ಹೀಗಿದೆ.

"ತೌರ ಸುಖದೊಳೆನ್ನ ಮರೆತಿಹಳು ಎನ್ನದಿರಿ
ನಿಮ್ಮ ನೆನಪೇ ನನ್ನ ಹಿಂಡುವುದು ಹಗಲಿನಲಿ
ಇರುಳಿನಲಿ ಕಾಣುವುದು ನಿಮ್ಮ ಕನಸು"
(ಮೈಸೂರು ಮಲ್ಲಿಗೆ ಪುಟ. ೩೬)

ಇಲ್ಲಿ 'ನಿಮ್ಮ ಪ್ರೇಮವ ನೀವೆ ಒರೆಯನಿಟ್ಟು' ಮತ್ತು 'ನಿಮ್ಮ ನೆನಪೇ ಹಿಂಡುವುದು ಹಗಲಿನಲಿ' ಎನ್ನುವ ಸಾಲುಗಳು ಮತ್ತೆ ಮತ್ತೆ ನಮ್ಮ ಹೃದಯದಲ್ಲಿ ಅನುರಣಿತವಾಗುತ್ತವೆ. ನಲ್ಲ-ನಲ್ಲೆಯರ ಪ್ರೇಮ ಬೇರೆಬೇರೆಯಲ್ಲ, ಅದು ಒಂದೇ. ಆದ್ದರಿಂದ ನನ್ನ ಪ್ರೇಮವನ್ನು ತಾನೇ ಪ್ರತ್ಯೇಕವಾಗಿ ಒರೆಯಿಟ್ಟು ನೋಡಬೇಕಾದ ಅವಶ್ಯಕತೆಯೇನೂ ಇಲ್ಲ ಎನ್ನುವ ಭಾವನೆ

ಸುಂದರವಾಗಿವೆ. ಹಾಗೆಯೇ 'ಮರೆತಿಹಳು ಎನ್ನದಿರಿ' ಎನ್ನುವ ಅವಳ ನುಡಿಯಲ್ಲಿ ತಮ್ಮ ಭಿನ್ನಾಭಿಪ್ರಾಯಗಳನ್ನು ಪ್ರೀತಿಯಿಂದಲೇ ಬಗೆಹರಿಸಿಕೊಳ್ಳಬೇಂಬ ನಿಲುವಿದೆ.

'ವಿರಹ' ಎಂಬುದು ಗಂಡು-ಹೆಣ್ಣಿನ ಅಗಲಿಕೆಯಲ್ಲಿ ಸಹಜ ಅನ್ಯೋನ್ಯ ದಾಂಪತ್ಯದಲ್ಲಿ ಪ್ರೇಮ ಅನನ್ಯವಾದುದು. ಇಂತಹ ಪ್ರೇಮಿಗಳಲ್ಲಿ ವಿರಹ ಮನೆಮಾಡಿದರೆ, ಅದರ ದಾಹ ಹೇಳತೀರದು. ಇದು ಆ ಶ್ರೀರಾಮನನ್ನು ಬಿಟ್ಟಿಲ್ಲ. ಇಂತಹ ಒಂದು ಮಾದರಿಗೆ 'ಕಾಮದಹನ' ಕವನ ಮುಂದಿನ ಸಾಲಿನಲ್ಲಿ ನಿಲ್ಲುತ್ತದೆ.

'ಆ ಅರ್ಧಕಾಮನೇ ರಾಮನನ್ನು ಕೆರಳಿಸಿದ;
ಪಾಂಡವರ ನರಳಿಸಿದ ಕಾಡುಗಳಲಿ,
ಲೋಕದಲಿ ಹೆಣ್ಣುಗಂಡೆಲ್ಲ ಕಾಮನ ಬಳಗ;
ಅವನದೇ ಆಡಳಿತ ರಾಜ್ಯದಲಿ,

(ಮೈಸೂರು ಮಲ್ಲಿಗೆ, ಪು. ೨೫)

ಪ್ರೇಮದಲ್ಲಿ 'ಕಾಮ' ಅಮರ. 'ಕಾಮದಹನ'ದ ವಿಷಯ ತುಂಬ ಗಹನವಾದುದೆಂದು ಹೇಳುತ್ತ, ಇನಿಯ ಮನದರಸಿಗೆ ಹೇಳಿದ ಮಾತಿದು. ಹೋಳಿ ಹುಣ್ಣಿಮೆಯ 'ಕಾಮದಹನ'ವನ್ನು ಹಿನ್ನೆಲೆಯಾಗಿಟ್ಟುಕೊಂಡು ಪೌರಾಣಿಕ ಅಂಶಗಳನ್ನು ಸ್ಪಷ್ಟಪಡಿಸುತ್ತಲೇ 'ಕಾಮ' ಶಾಶ್ವತವಾದುದೆಂದು ತಿಳಿಸುತ್ತಾರೆ.

'ಪ್ರಶ್ನೆಗೆ ಉತ್ತರ' ಎಂಬ ಕವನದಲ್ಲಿ ಗಂಡ-ಹೆಂಡತಿ ತಾಂಬೂಲ ಮೆಲ್ಲುತ್ತ, ಸರಸ-ಸಲ್ಲಾಪವನ್ನಾಡುತ್ತ ಒಬ್ಬರಿಗೊಬ್ಬರು ಕೇಳುವ ಪ್ರಶ್ನೆಗಳಲ್ಲೇ ಮತ್ತು ಅದಕ್ಕೆ ಅವರು ನೀಡುವ ಉತ್ತರದಲ್ಲಿಯೇ ನಮ್ಮನ್ನು ಭಾವನಾ ಲೋಕಕ್ಕೆ ಕರೆದೊಯ್ಯುವ ತಂತ್ರವಿದೆ. "ಒಂದಿರುಳು ಕನಸಿನಲಿ ನನ್ನವಳ ಕೇಳಿದೆನು। ಚೆಂದ ನಿನಗಾವುದೆಂದು। ನಮ್ಮೂರು ಹೊನ್ನೂರು ನಿಮ್ಮೂರು ನವಿಲೂರು ಚೆಂದ ನಿನಗಾವುದೆಂದು". ಇಲ್ಲಿ ಎರಡು ಊರುಗಳ ಪ್ರಸ್ತಾಪವಿದೆ. ಜೊತೆಗೆ ಉಂಡು ಮಲಗುವ ವೇಳೆ ತಾಂಬೂಲ ಮೆಲ್ಲುವ ಸಖ-ಸಖಿಯರ ಸರಸ-ಸಲ್ಲಾಪವಿದೆ. ಇದು ಇಂದಿನ ಪೀಳಿಗೆಯ ದಂಪತಿಗಳಿಗೆ ಪಾಠವಾಗಬೇಕು. ಜೊತೆಗೆ ಇದು ಮುದ್ದಣ-ಮನೋರಮೆಯ ದಾಂಪತ್ಯದ ಸವಿಯನ್ನು ನೆನಪಿಸುತ್ತದೆ.

ಕೆ.ಎಸ್.ನ ಅವರ ಪಾಲಿಗೆ ಕವಿತೆ ಬದುಕಿನ ಎಲ್ಲಾ ರೀತಿಯ ಅನುಭವಗಳ ಪರಿಣಾಮವೇ ಆದರೂ, ಅದರಲ್ಲಿ ಒಲವಿನ, ಚೆಲುವಿನ ಅನುಭವಕ್ಕೆ ಮೊದಲ ಮಣೆ. ಬದುಕಿನಲ್ಲಿ ಇರುವುದು ಬರೀ ಸುಖವೊಂದೆ, ದುಃಖ ಎಂಬುದಿಲ್ಲ, ಅಥವಾ ಇದ್ದರೂ ತಮ್ಮ ಅನುಭವಕ್ಕೆ ಬಂದಿಲ್ಲ ಎಂಬುದು ಅವರ ಅಭಿಪ್ರಾಯವಲ್ಲ. ಅವರೇ ಒಂದೆಡೆ-

"ದುಃಖಮಯವೀ ಬದುಕು ಎನ್ನುವವ ಕವಿಯೆ?
ದುಖವೆಂಬುದಿಲ್ಲವೇ ದುಃಖದನುಭವಿಗೆ
ದುಃಖ ದಿನದಿನ ಬಂದು ಇರಿದಿರಿದು ಪೋಗೆ
ಹರ್ಷ ವರ್ಷಕ್ಕೊಮ್ಮೆ ಇಣುಕಿನೋಡೆ
ಬದುಕಿಗೂ ಸಾವಿಗೂ ನಡುವೆ ನಿಂದು
ಈ ಭೂಮಿ ಈ ಚೆಲುವು ನಮ್ಮದೆಂದು
ಹೊತ್ತಹೊರೆ ಬಲುಹಗುರವೆನ್ನದವ ಕವಿಯೆ?"

(ಐರಾವತ, ಪು. ೧೧)

ಒಟ್ಟಿನಲ್ಲಿ ಇದು ಅವರ ನಂಬಿಕೆ; ನಿಲುವು. ಇದನ್ನು 'ಪಲಾಯನವಾದ' ಎಂದು ಹೇಳಲಾಗದು. ಬದುಕನ್ನು ನೋಡುವ ರೀತಿ ಒಬ್ಬೊಬ್ಬರದು ಒಂದೊಂದು ತೆರನಾಗಿರುತ್ತದೆ. ಕೆ.ಎಸ್.ನ ಅವರ ಬದುಕು ಅವರ ಅನುಭವದ ತೆಕ್ಕೆಗೆ ಬಣ್ಣದ ಬದುಕು. ಹಾಗೆಂದ ಮಾತ್ರಕ್ಕೆ ತನಗೆಟುಕದ ಬದುಕನ್ನು ಕಾವ್ಯದಲ್ಲಿ ಪಡಿಮಿಡಿದಿದ್ದಾರೆಂದರೆ, ತಪ್ಪಾಗಬಹುದೇನೋ! ಹೀಗೆ ಜನರ ಭಾವನೆ ಭಾಷೆಗಳಿಗೆ ಮಿಡಿದವರು ವಿರಳ. ಇವರಂತೆ ಜನಸಾಮಾನ್ಯರ ಬಳಿಗೆ ಕಾವ್ಯಗಳನ್ನು ತೆಗೆದುಕೊಂಡು ಹೋದವರೂ ವಿರಳ. ಸಾಮಾನ್ಯರ ಸುಖ-ದುಃಖಗಳನ್ನು ಗಮನದಲ್ಲಿಟ್ಟುಕೊಂಡು ಅದಕ್ಕೆ ಉಲ್ಲಾಸವನ್ನು, ಸಾಂತ್ವನವನ್ನು ನೀಡಬೇಕೆಂಬುದು ಅವರ 'ಮೈಸೂರು ಮಲ್ಲಿಗೆ'ಯ ಆಶಯ.

"ವೈವಾಹಿಕ ಮತ್ತು ಕೌಟುಂಬಿಕ ವ್ಯವಸ್ಥೆಗಳು ಸಡಿಲಗೊಳ್ಳುತ್ತಿರುವ ಅಥವಾ ಸಂಕೀರ್ಣಗೊಳ್ಳುತ್ತಿರುವ ಇಂದಿನ ವ್ಯವಸ್ಥೆಗೆ ಕೆ.ಎಸ್.ನ ಚಿತ್ರಿಸಿರುವ ಪ್ರಪಂಚ ಹಳೆಯದರಂತೆ ಕಾಣಬಹುದು. ಸಾಮಾಜಿಕ ಮೌಲ್ಯವನ್ನು ಕುಟುಂಬದ ಚೌಕಟ್ಟಿನಲ್ಲಿ ಕಟ್ಟಿಕೊಡುವುದು ಈ ಎಲ್ಲಾ ಕವನಗಳ ಕರ್ತವ್ಯವಾಗಿತ್ತು. ಈ ಕವಿತೆಗಳಲ್ಲಿ ಕಾಣುವುದು ಚೆಲುವನ್ನು ಮಾತ್ರವಲ್ಲ; ಅರಿವನ್ನೂ ಕೂಡ. ಸೌಂದರ್ಯ ಮತ್ತು ಜೀವನ ಮೀಮಾಂಸೆಗಳೆರಡೂ ಇಲ್ಲಿ ಸಮಾವೇಶಗೊಂಡಿವೆ"[೬]

ಮೈಸೂರು ಮಲ್ಲಿಗೆಯ ಕವನ ಸಂಕಲನದಲ್ಲಿ ಸುಮಾರು ನಲವತ್ತೈದು ಕವನಗಳಿವೆ. ಆ ಸಂಕಲನದ ಎಲ್ಲಾ ಕವನಗಳು ಸಹ 'ದಾಂಪತ್ಯ ಪ್ರೇಮ'ವನ್ನೇ ವಸ್ತುವಾಗಿಟ್ಟುಕೊಂಡ ಕವನಗಳು. ನಂತರ ಬಂದ 'ದೀಪದ ಮಲ್ಲಿ', 'ದುಂಡು ಮಲ್ಲಿಗೆ', 'ಇರುವಂತಿಗೆ', 'ಉಂಗುರ' ಇತ್ಯಾದಿ ಕವನ ಸಂಕಲನಗಳಲ್ಲೂ ಕೌಟುಂಬಿಕ ಜೀವನದ ದಿನನಿತ್ಯ ಬದುಕಿನ ದಂಪತಿಗಳ ಕಲಹ, ವಿರಹ, ಅನುಮಾನ, ಸಮಾಗಮ, ತಾಯ್ತನ, ಬಡತನ, ವಾತ್ಸಲ್ಯ ಹೀಗೆ ಹಲವಾರು ಅಂಶಗಳನ್ನು ನೋಡಬಹುದು. ಆದರೆ, ಅಧ್ಯಯನದ ದೃಷ್ಟಿಯಿಂದ 'ಮೈಸೂರು ಮಲ್ಲಿಗೆ'ಯನ್ನು ಪ್ರಧಾನವಾಗಿಟ್ಟುಕೊಂಡಿದ್ದೇವಷ್ಟೆ.

ದಾಂಪತ್ಯದ ಸವಿ ಹೊಸದರಲ್ಲಿ ಉತ್ಸಾಹ, ಹುಮ್ಮಸ್ಸು, ತುಂಟತನ, ರಸಿಕತೆಯಿಂದ ಕೂಡಿದ್ದು, ಎಂತಹವರನ್ನೂ ತನ್ನ ಬಳಿ ಸೆಳೆಯುತ್ತದೆ. ವಿವಾಹಾಕಾಂಕ್ಷಿಗಳಿಗೆ ಜೀವನದ ವೈಭವೀಕೃತ ಬಣ್ಣಬಣ್ಣದ ಕನಸುಗಳನ್ನು ಕಟ್ಟುಕೊಳ್ಳುವಂತೆ ಮಾಡುತ್ತದೆ. ನಂತರ ಸಂಸಾರದ ಹೊಣೆ ಹೆಚ್ಚಾದಂತೆಲ್ಲಾ ಸಾಂಸಾರಿಕ ತಾಪತ್ರಯದ ನಾನಾ ಬಗೆಗಳು ತಲೆದೋರುತ್ತವೆ. ಅಂತಹ ವಸ್ತು ಪ್ರಧಾನವಾಗಿರುವ ಕವನ 'ದೀಪದ ಮಲ್ಲಿ' ಕವನ ಸಂಕಲನದ 'ಸಂಬಳದ ಸಂಜೆ' ಕವನ.

"ಸಂಬಳದ ಸಂಜೆ ಒಳಜೇಬು ಬೆಳಕಾಗಿರಲು
ಮುಗುಳನಗೆ ಸೂಸಬೇಕು!
ತಂದ ಹಣ ತುಂಡಾಗಿ ತಲೆನೋವು ಬಂದಿರಲು
ಮಂದಲಗೆ ಹಾಸಬೇಕು!
ಏಳಡಿಯ ಕಿರುಮನೆಗೆ ಇಪ್ಪತ್ತು ರೂಪಾಯಿ
ಬಾಡಿಗೆಯ ಬಾಚಬೇಕು!

"ಅಂಗಡಿಯ ಸೆಟ್ಟಿ ಬಂದರೆ, ಅವನ ಉಂಗುರದ
ಕೈಗೆ ಮೂವತ್ತು ಸುರಿದು
ಮನುವನದ ತನಕ ಹೋಗೇಳು ಎಂದಿತು ಜೀವ
ಎದೆಯೊಳಗೆ ತಣ್ಣಗುರಿದು"

(ಸಂಬಳದ ಸಂಜೆ ಪು. ೭೬)

ಈ ರೀತಿ ಖರ್ಚಿನ ಲೆಕ್ಕವನ್ನು ಹೇಳುವ ಈ ಕವಿತೆ ದಾಂಪತ್ಯದ ಸವಿ ಮೊದಲಿದ್ದಂತೇ ಉಳಿಯುವುದು ಕಷ್ಟ ಎಂಬುದನ್ನು ವ್ಯಕ್ತಪಡಿಸುತ್ತದೆ. ಬಹುಶಃ ಪ್ರೀತಿಯಲ್ಲೇ ಮುಳುಗಿರುವ ದಂಪತಿಗಳನ್ನು ಎಚ್ಚರಿಸಲು ಈ ಕವಿತೆ ಬರೆದಿರಬಹುದು.

ಶ್ರೀ ಜಿ.ಪಿ. ರಾಜರತ್ನಂ ಅವರ 'ರತ್ನನ ಪದ'ಗಳ ಧಾಟಿಯಿಂದ ಆಕರ್ಷಿತರಾದ ಕವಿ ತಾವೂ ಆ ದೆಸೆಯಲ್ಲಿ ಮೂಡಿರುವ ಪ್ರಯತ್ನವನ್ನು ಅವರ 'ಇರುವಂತಿಗೆ' ಕವನ ಸಂಕಲನದಲ್ಲಿ ಕಾಣಬಹುದು. 'ನನ್ ಲಚ್ಚಿ', ನಿನ್ನ ಹೆಸರು', ನನ್ ಚಿನ್ನ' 'ಅನ್ನದ್ ತಪ್ಲೆ' ಇತ್ಯಾದಿ ಕವನಗಳು ಅದೇಕೋ ಈ ಪ್ರಯತ್ನ ಕವಿಗೆ ಸರಿಯಾಗಿ ಒಗ್ಗಲಿಲ್ಲವೇನೋ ನಂತರ ಬಂದ ಕವನ ಸಂಕಲನಗಳಲ್ಲಿ ತಮ್ಮ ಶೈಲಿಯನ್ನೇ ಬಳಸಿಕೊಂಡರು. 'ದೀಪದ ಮಲ್ಲಿ' ಕವನ ಸಂಕಲನದಲ್ಲಿ ಪ್ರೀತಿಯ ಮತ್ತೊಂದು ಮುಖವಾದ 'ವಾತ್ಸಲ್ಯ'ವನ್ನು ಹೆಚ್ಚಾಗಿ ನೋಡಬಹುದು. ಅವರ 'ತುಂಗಭದ್ರೆ' ಕವನದಲ್ಲಿನ ಸಂದರ್ಭವೊಂದು ಹೀಗಿದೆ.

"ತೌರಿನಿಂದ ಹಿಂದಿರುಗುತ್ತಿರುವ ಹೆಂಡತಿಯನ್ನು ಎದುರುಗೊಳ್ಳಲು ಪತಿ ಹೋಗಿದ್ದಾನೆ– 'ಆಕೆ ಬರುತಿಹಳೆಂದು ಮನದೊಳಗೆ ಹಾಡಿ' ಮಗ ಬಂದ ಎಂದು ತಂದೆ

ಜೀವ ಹಿಗ್ಗಿತು. ಕಣ್ಣಿಗೆ ಬೀಳದೆ ಬೆಳೆದ ಪುಟ್ಟ ಮಗಳು ಇವನ ಹೃದಯ ನಂದನದಲ್ಲಿ ಆಡಿದಳು. ನಿಲ್ದಾಣದಲ್ಲಿ ಹೀಗೆ ದಾರಿ ನೋಡುತ್ತಿರುವಾಗಲೇ ನುಗ್ಗಿ ಬಂದಿತು ರೈಲು. ತಂದೆ–ಮಕ್ಕಳ ಮಿಲನದ ಈ ಕ್ಷಣವನ್ನು ಮೂರು ಮಾತಿನಲ್ಲಿ ಕನ್ನಡಿ ಕಟ್ಟು ಹಾಕಿ ಓಡಿದಿಡುತ್ತದೆ ಕವಿಯ ಶೈಲಿ;"[೭].

"ಬಾಗಿಲನು ತೆರೆದು ಕೆಳಗಿಳಿದು ಬಂದಳು ಚೆಲುವೆ;
ಮಗ ಇಳಿದ ಮಹಾರಾಯ ನಗುತ; ತೊಟ್ಟಿಲಿನೊಳಗೆ
ಕಂದಮ್ಮ ನೋಡಿದಳು 'ಹೊಸಬನಿವರಾರು?' ಎಂದು".

ಹೀಗೆ ನೋಡಿದವಳೇ ತುಂಗಭದ್ರೆ, ವರುಷದ ಮಗಳು. ಈ ಕವನದಲ್ಲಿ ತನ್ನ ಮಗಳ ಬಗ್ಗೆ ಮೊದಲಿನಿಂದಲೂ ಕೊನೆಯವರೆಗೂ ಅತ್ಯಂತ ಆತ್ಮೀಯವಾದ ರೀತಿಯಲ್ಲಿ, ಮಧುರವಾದ ವಾತ್ಸಲ್ಯಭಾವದೊಂದಿಗೆ ಬರೆದಿದ್ದಾರೆ.

"ಈ ತುಂಗಭದ್ರೆ–ಹೊಳೆಯಲ್ಲ ವರುಷದ–ಮಗಳು;
ಇವಳೆನ್ನ ದೇವರಾಗಿಹಳು"

ಈ ರೀತಿ ಮಗಳನ್ನು ಕುರಿತು ಬರೆದ ಕವಿತೆ 'ತುಂಗಭದ್ರೆ'ಯಾದರೆ, ಗಂಡು ಮಗು 'ಆನಂದ'ನನ್ನು (ಉಂಗುರ ಕವನ ಸಂಕಲನ) ಕುರಿತು ಮತ್ತೊಂದು ಕವನ ರಚಿಸಿದ್ದಾರೆ. ಇದುವರೆಗೆ ಎಲ್ಲಿಯೋ ಅನಂತದಲ್ಲಿದ್ದು ಈ ಮಗುವಿನ ಮೂಲಕ ಭೂಮಿಗಿಳಿದಿದೆ ಬಾಳಿನ 'ಆನಂದ' ಎನ್ನುತ್ತಾ,

"ಲೋಕಾನುಗ್ರಹ ದಿಗಂತದಿಂದ
ಅಂತಿಂತಮೃತದ ಅನಂತದಿಂದ
ನೀಲಾಕಾಶ ಪ್ರಕಾಶದಿಂದ
ಬಂದನು ಭೂಮಿಗೆ ಆನಂದ"

('ಉಂಗುರ' ಕವನ ಸಂಕಲನ, 'ಆನಂದ')

ಹೀಗೆ ತಮಗಾಗಿ ನೀಲಾಕಾಶ ಪ್ರಕಾಶದಿಂದ ಭೂಮಿಗೆ ಬಂದ ತಮ್ಮ ಕಂದನನ್ನು ಕಂಡು ಹರ್ಷಿಸುತ್ತಾರೆ. ಇದೇ ನಿಟ್ಟಿನಲ್ಲಿ ಬಂದ ಅವರ 'ತೊಟ್ಟಿಲಹಾಡು', ರಾಮಬಂಟ', 'ಕಾಮನಬಿಲ್ಲು', 'ನನ್ನ ಮಗಳು', 'ಮಕ್ಕಳೆಲ್ಲಾ ಹಾಗೆಯೇ' ಮುಂತಾದ ಕವಿತೆಗಳು ಮಕ್ಕಳ ಆಟ–ಪಾಠ, ತುಂಟತನವನ್ನು ನಿದರ್ಶನವಾಗಿಟ್ಟುಕೊಂಡು ಬಂದ ಕವನಗಳಾಗಿವೆ.

ಹೀಗೆ ಕೆ.ಎಸ್.ನ ಅವರಿಂದ ರಚಿತವಾದ ಪ್ರತಿಯೊಂದು ಕವನಗಳೂ ಸಹ ನಮ್ಮ ಭಾರತೀಯ ಸಂಸ್ಕೃತಿಗೆ ನೀಡಿದಂತಹ ಅತ್ಯಪೂರ್ವವಾದ ಕೊಡುಗೆಯಾಗಿದೆ.

## ಅಡಿಟಿಪ್ಪಣಿಗಳು

೧. ಪು.ತಿ.ನ., ಡಾ. ಪ್ರಭುಶಂಕರ, ಸಂ. ಡಾ. ಪ್ರಧಾನ್ ಗುರುದತ್ತ, ಮೊ.ಮು, ೨೦೦೨, ನವಕರ್ನಾಟಕ ಪ್ರಕಾಶನ, ಪು. ೭.

೨. ಹಾಡೇ ಹಾದಿಯ ತೋರಿತು, ಎಚ್.ಎಸ್.ರಾಘವೇಂದ್ರರಾವ್, ಕನ್ನಡ ಸಂಘ ಪಬ್ಲಿಕೇಷನ್, ೨೦೧೩, ಪು. ೧೭೪.

೩. ನೆನಪಿನ ದೋಣಿಯಲ್ಲಿ, ಕುವೆಂಪು, ಉದಯರವಿ ಪ್ರಕಾಶನ, ಪುಟ. ೧೧೫೨.

೪. ನೆನಪಿನ ದೋಣಿಯಲ್ಲಿ, ಕುವೆಂಪು, ಉದಯರವಿ ಪ್ರಕಾಶನ, ಪುಟ. ೧೧೫೭, ೫೮.

೫. ನೆನಪಿನ ದೋಣಿಯಲ್ಲಿ, ಕುವೆಂಪು, ಉದಯರವಿ ಪ್ರಕಾಶನ, ಪುಟ. ೧೧೬೪.

೬. ಕೆ.ಎಸ್.ನರಸಿಂಹಸ್ವಾಮಿ, ಡಾ. ರಾಮೇಗೌಡ, ನವಕರ್ನಾಟಕ ಪ್ರಕಾಶನ, ೨೦೦೫, ಪು. ೧೨೪.

೭. ಚಂದನ, ಕೆ.ಎಸ್.ನರಸಿಂಹಸ್ವಾಮಿ ಅಭಿನಂದನ ಸಮಿತಿ, ಬೆಂಗಳೂರು, ೧೯೭೨, ಪು. ೨೨.

*****

# ಅಧ್ಯಾಯ – ೪

# ಬೇಂದ್ರೆ ಕಾವ್ಯಗಳಲ್ಲಿ ದಾಂಪತ್ಯದ ಸ್ವರೂಪ

'ಒಲವೆ ನಮ್ಮ ಬದುಕು' ಎಂದು ಸಾರಿದ ಬೇಂದ್ರೆಯವರ ಕವನಗಳು ಪತಿ-ಪತ್ನಿಯರ ಸ್ನೇಹ ಸಂಬಂಧದ ಪರಸ್ಪರರು ಅರಿತು ಬಾಳುವ, ಬದುಕಿನಲ್ಲಿ ನಗುತ್ತ ಬಾಳ್ವೆ ಮಾಡುವ ಚಿಂತನಾ ಲಹರಿಯಲ್ಲಿ ಬಂದಿರುವಂತಹವು. ಜೀವನದ ಅನೇಕ ಆದರ್ಶಗಳಲ್ಲಿ ಪ್ರೇಮ ಮತ್ತು ಶ್ರೇಯ ಪ್ರಮುಖವಾದವುಗಳು. ಪ್ರಿಯವಾದ ವಸ್ತುಗಳಿಂದ, ವ್ಯಕ್ತಿಗಳಿಂದ, ಘಟನೆಗಳಿಂದ ದೊರಕುವ ಆನಂದ ಪ್ರೇಮದ ಫಲಶ್ರುತಿ. ಗಂಡು-ಹೆಣ್ಣು, ಪ್ರಿಯಕರ-ಪ್ರಿಯೆ, ನಾಯಕ-ನಾಯಕಿ ಒಂದೇ ಆಗಿದ್ದರೂ ಪರಿಸರದಿಂದ ಭಿನ್ನ. ನಿತ್ಯ ಜೀವನದಲ್ಲಿಯ ಗಂಡು-ಹೆಣ್ಣು ಪರಸ್ಪರರ ಗುಣಗಳನ್ನು ಮೆಚ್ಚಿ ಒಲಿದಾಗ ಪ್ರಿಯಕರ-ಪ್ರಿಯೆ, ನೀರ-ನೀರೆ, ಆಗಿ ಪತಿ-ಪತ್ನಿ ಆಗಲೂಬಹುದು; ಪತಿ-ಪತ್ನಿ ಆಗದೇ ಪ್ರಿಯಕರ-ಪ್ರಿಯೆಯಾಗಿಯೇ ಉಳಿಯಬಹುದು. ಕೃಷ್ಣ-ರಾಧೆಯಂತೆ.

"ಒಲವು – ಪ್ರೀತಿ ಜೀವನದ ಬಹುಮುಖ್ಯವಾದ ಒಂದು ಸ್ಥಾಯಿಭಾವ. ಒಲವಿನ ಮುಖ ಹಲವು. ಕೆಲವರ ಜೀವನದಲ್ಲಿ ಕೆಲವು ಮುಖಗಳ ಆವಿಷ್ಕಾರ, ಎಲ್ಲ ಮುಖಗಳನ್ನು ಕಂಡವರು ಪ್ರಾಯಶಃ ಯಾರೂ ಇಲ್ಲ. ಈ ಒಲವನ್ನು ಪ್ರೀತಿಯನ್ನು ಹೆಣ್ಣು-ಗಂಡಿನ ಹರೆಯದ ಸೆಳೆತಕ್ಕೆ ಮಾತ್ರ ಸೀಮಿತಗೊಳಿಸಿ ಭ್ರಮಿಸಿಕೊಂಡವರೆ ಬಹಳ ಮಂದಿ.

ಮುಖ್ಯವಾಗಿ ಪ್ರೀತಿಗೆ ಮೂರು ಮಜಲುಗಳುಂಟು. ಹಿರಿಯರ ಬಗೆಗಿನ ಪ್ರೀತಿ, ಕಿರಿಯರ ಮೇಲಣ ಪ್ರೀತಿ ಮತ್ತು ಸಮಾನರಲ್ಲಿ ಪರಸ್ಪರ ಪ್ರೀತಿ. ನಮ್ಮಿಂದ ಎತ್ತರದಲ್ಲಿರುವ ವಸ್ತುವನ್ನು ಕಂಡು, ಆ ಎತ್ತರಕ್ಕೆ ಗೌರವದ ಗರಿಮೂಡಿ ಪ್ರೀತಿಸುತ್ತೇವೆ. ನಾವು ಗುರುಹಿರಿಯರನ್ನು, ಅನುಭಾವಿಗಳು ಭಗವಂತನನ್ನು ಪ್ರೀತಿಸುವ ಬಗೆ ಇದು; ಪ್ರೀತಿಯ ಈ ಮೊದಲ ಮುಖವನ್ನೇ ಭಕ್ತಿ ಎಂದು ಕರೆಯುತ್ತಾರೆ.

ನಿಮ್ಮಿಂದ ತಗ್ಗಿನಲ್ಲಿರುವ ವಸ್ತುವನ್ನು ಆ ತಗ್ಗಿನದಾರಿಗುಂಟ ಮಮತೆಯಿಂದ ಇಳಿದು ನಾವು ಪ್ರೀತಿಸುತ್ತೇವೆ. ತಂದೆ-ತಾಯಿ ತಮ್ಮ ಮಕ್ಕಳನ್ನು ಪ್ರೀತಿಸುವ ಬಗೆ ಇದು; ಪ್ರೀತಿಯ ಈ ಎರಡನೆಯ ಮುಖವನ್ನೇ ವಾತ್ಸಲ್ಯ ಎಂದು ಕರೆಯುತ್ತಾರೆ.

ಇಬ್ಬರೂ ಒಂದೇ ನೆಲೆಯಲ್ಲಿ ನಿಂತು, ಒಬ್ಬರನ್ನೊಬ್ಬರು ಪೂರ್ಣವಾಗಿ ಅರಿತುಕೊಂಡು ಪರಸ್ಪರ ಪ್ರೀತಿಸುತ್ತೇವೆ. ಗೆಳೆತನದ ನಿರ್ವ್ಯಾಜ ಪ್ರೀತಿ ಇದು; ಇದನ್ನೇ ಸ್ನೇಹ ಎಂದು ಕರೆದರು. ಈ ಸ್ನೇಹದ ಎರಡು ಘಟಕಗಳಲ್ಲಿ ಒಂದು ಹೆಣ್ಣು ಇನ್ನೊಂದು ಗಂಡಾದಾಗ, ಬಂಗಾರಕ್ಕೆ ಕೆಂಪು ಮೂಡಿದಂತೆ ಸ್ನೇಹಕ್ಕೆ ಹೊಸಸಿಂಗಾರ. ಸ್ನೇಹ

ಶೃಂಗಾರಗೊಳ್ಳುತ್ತದೆ. ಶೃಂಗಾರವೇ ಆಗಿಬಿಡುತ್ತದೆ. ಹೀಗೆ ಒಮ್ಮೆ ವಾತ್ಸಲ್ಯವಾಗಿ, ಒಮ್ಮೆ ಸ್ನೇಹವಾಗಿ, ಒಮ್ಮೆ ಭಕ್ತಿಯಾಗಿ, ಈ ಪ್ರೀತಿ ಮುಪ್ಪುರಿಗೊಂಡು ಜೀವನವನ್ನು ನಿಯಂತ್ರಿಸುತ್ತದೆ. ಶೃಂಗಾರ ಕೇಂದ್ರ ಬಿಂದು. ಆದರೆ, ಆಚೆಗೆ ಮಗ್ಗಲು ವಾತ್ಸಲ್ಯ, ಈಚೆಗೆ ಮಗ್ಗಲು ಭಕ್ತಿ"[೧].

ಬೇಂದ್ರೆಯವರು ದಾಂಪತ್ಯದ ಚೌಕಟ್ಟಿನಲ್ಲಿ ಪ್ರೀತಿಯನ್ನು ಅರಸುತ್ತ ಅದನ್ನು ಪ್ರೇಮಜ್ಯೋತಿಯನ್ನಾಗಿಸಿದ್ದಾರೆ. ಅವರು "ಅಧರ್ಮ ಕಾಮವು ಸಂಹಾರಿ, ಧರ್ಮ ಕಾಮವು ಆತ್ಮವಿಹಾರಿ. ಆತ್ಮ ವಿಹಾರಕ ಕಾಮವು ಭಕ್ತಿಬೀಜ"[೨] ಎಂದು ನುಡಿದಿದ್ದಾರೆ. ಬೇಂದ್ರೆಯವರ ಚಿಂತನೆಯು ಶ್ರೀ ಮಾತಾ ಅರವಿಂದರಿಂದ ಪುಷ್ಟಿಗೊಂಡಿದೆ. ಅವರು ತಮ್ಮನ್ನು 'ಅರೆನಾರಿಯಾದವ' ಎಂದು ಕರೆದುಕೊಂಡು ಸ್ತ್ರೀ-ಪುರಷ ಸಮಾನತೆಯನ್ನು ಪ್ರತಿಪಾದಿಸಿದ್ದಾರೆ.

ಈ ಸ್ತ್ರೀ-ಪುರುಷರು ಗಂಡ-ಹೆಂಡತಿಯಾಗಿ ಬಾಳ್ವೆ ಮಾಡಲು ತೊಡಗಿದಾಗ ಈ ಸಮಾನ ತತ್ವನ್ನು ಅರಿತಿರಬೇಕು ಎಂದು ಬೇಂದ್ರೆಯವರು ತಮ್ಮ ಕಾವ್ಯಗಳಲ್ಲಿ ಸಾರಿದ್ದಾರೆ. ಅವರು ತನ್ನ ಪತ್ನಿಯನ್ನು ಜೀವನದ ಗೆಳತಿ, ಸಖೀ ಎಂದು ಕರೆದು ಸಖ್ಯಭಾವದ ಆರಾಧಕರಾಗಿದ್ದಾರೆ. ಅವರು ಹೆಂಡತಿಯನ್ನು 'ನೀಯೆನ್ನ ಹೆಂಡತಿಯೋ ಮೈಗೊಂಡ ನನ್ನಿಯೋ' ಎಂದು ಸತ್ಯ, ಪ್ರೀತಿ, ಶಾಂತಿಯೇ ಹೆಂಡತಿ ಎಂದಿದ್ದಾರೆ. ಗಂಡ-ಹೆಂಡತಿಯ ಸ್ನೇಹದ ಚಿಗುರೊಡೆಯುವುದು ಕಣ್ಣಿನ ಬೆಳಕಿನಲ್ಲಿ ಪ್ರೀತಿ ಮಾಡಿ ಮನದಲ್ಲಿ ನೆಲೆಯೂರುವುದು ಮೊದಲು ಕಣ್ಣಿನೋಟದಲ್ಲಿ ಅದರ ಜೊತೆಜೊತೆಗೆ ಒಬ್ಬರನ್ನೊಬ್ಬರು ಅರಿಯುವ ಪ್ರಯತ್ನ ಸಾಗುತ್ತದೆ. ಅದನ್ನು ಬೇಂದ್ರೆಯವರು 'ಗಂಡುಸು-ಹೆಂಗುಸಿಗೆ' ಎಂಬ ಕವನದಲ್ಲಿ ಎದುರು-ಬದುರು ನಿಂತ ಕನ್ನಡಿಗಳ ರೂಪಕದಿಂದ ಸ್ಪಷ್ಟಗೊಳಿಸಿದ್ದಾರೆ.

"ಕನ್ನಡಿಯ ಒಳಗೆ ಪೆರಗನ್ನಡಿಯ ಪಡಿನೆಳಲು
ಕಣ್ಣೆದಿರುಗಣ್ಣಿನೊಳಗೊಬ್ಬರರೊಬ್ಬರ ಗೊಂಬೆ
ಚಿನ್ನನಂತದಪಾಂಗು ನಮ್ಮಿಬ್ಬರೊಳಗೆ ಹ-
ಬ್ಬಿಹುದು ಅರಿದರಿದು ಹೆಣ್ಣೆ" (ಗಂಡುಸು-ಹೆಂಗುಸಿಗೆ)

ಕನ್ನಡಿಯ ಒಳಗೆ ಎದುರುಗನ್ನಡಿಯ ಪಡಿನೆಳಲು ಬಿದ್ದು ಅದು ಪ್ರತಿಬಿಂಬಿಸುತ್ತದೆ. ಹಾಗೆಯೇ ಎದುರು-ಬದುರು ನಿಂತ ಗಂಡು-ಹೆಣ್ಣಿನ ಕಣ್ಣುಗಳಲ್ಲಿ ಅವರ ಗೊಂಬೆಗಳು ಮೂಡಿ ಅದು ಮೈಮನಸ್ಸಿನಲ್ಲೆಲ್ಲ ಚಿನ್ನವಾಗಿ ಹರಿದಾಡುತ್ತದೆ. ಹಾಗೆ ಹರಿದ ಭಾವ ಲಹರಿಯಲ್ಲಿಯೇ ಅವರು ಒಬ್ಬರನ್ನೊಬ್ಬರು ಹೆಚ್ಚು ತಿಳಿಯುತ್ತಾರೆ ಎಂದು 'ಹಬ್ಬಿಹುದು ಅರಿದರಿದು ಹೆಣ್ಣೆ!' ಎಂದಿದ್ದಾರೆ. ಈ ರೀತಿ ಗಂಡ-ಹೆಂಡತಿಯರು ಅಂತರಂಗದಲ್ಲಿ ಬೆಳಕಾಗಿ ಚೆಲುವಾಗುತ್ತಾರೆ ಎಂಬ ತತ್ವವನ್ನು ಬೇಂದ್ರೆ ಕಾವ್ಯವಾಗಿಸಿದ್ದಾರೆ.

ಬೇಂದ್ರೆಯವರು ತನ್ನ ಮತ್ತು ತನ್ನ ಹೆಂಡತಿಯ ಆಂತರಿಕವಾದ ಏಕಾಂತದ ಒಲುಮೆಯನ್ನು ಲೋಕಾಂತವಾಗಿ ಹಾಡುವಾಗ ಒಂದು ಬಿಗುವಿನಲ್ಲಿ ಸುಸಂಸ್ಕೃತ ರೀತಿಯಲ್ಲಿ, ಆಹ್ಲಾದಮಯವಾಗುವಂತೆ ರಚಿಸಿರುವುದು ಅವರ ಪರಿಣತ ಮನಸ್ಸಿಗೆ ಸಾಕ್ಷಿಯಾಗಿದೆ. ದಾಂಪತ್ಯದಲ್ಲಿ ಕಾಮಸಹಜ, ಅದು ಪ್ರೇಮವಾಗಿ ಅರಳಬೇಕು. "ರಾಮನಾಗಲೀ, ಕಾಮನಾಗಲೀ ಮನೆ ಒಡತಿ ಇಲ್ಲದೆ ಮಡದಿ ಇಲ್ಲದೆ ಎಂಥ ಶಕ್ತಿಯು ಇದ್ದವನಿಗೂ ರಮಣೀಯತೆ ಬರಲಾರದು ಎಂಬ ಸ್ಪಷ್ಟ ಆಲೋಚನೆಯನ್ನು ಹೊಂದಿದ ಬೇಂದ್ರೆಯವರು ಈ ನೆಲದ ಬದುಕನ್ನು ಸವಿದು ಆಧ್ಯಾತ್ಮಿಕತೆಯ ಚಿಂತನಕ್ಕೆ ಮನಸ್ಸು ಕೊಟ್ಟು ರಸಋಷಿಯಾದರು"[೩].

'ಒಲವೇ ನಮ್ಮ ಬದುಕು' ಎಂಬ ಅಂಬಿಕಾತನಯದತ್ತರ ಕಾವ್ಯಸೂತ್ರ ಈ ಎಲ್ಲ ಭಾವಗಳನ್ನು ಸಮಷ್ಟಿಯಲ್ಲಿ ಅವರ ಪ್ರೇಮಗೀತೆಗಳನ್ನು ಹಾಡಿದಾಗ ನಮ್ಮ ಮುಂದಿರಿಸುತ್ತವೆ. ಬೇಂದ್ರೆಯವರಿಗೆ ದಾಂಪತ್ಯ ಎಂಬುದು ಒಂದು ಸಾಧನೆ. "ಹಳ್ಳದ ದಂಡ್ಯಾಗ" , 'ನನ್ನ ಕೈಹಿಡಿದಾಕೆ', ಹುದುಗಲಾರದ ದುಃಖ', 'ನೀ ಹೀಂಗ ನೋಡಬ್ಯಾಡ ನನ್ನ', 'ನಾನು ಬಡವಿ ಆತ ಬಡವ', 'ಕುಣಿಯೋಣು ಬಾರಾ' ಇತ್ಯಾದಿ ಕವನಗಳಲ್ಲಿ ಅಂಬಿಕಾತನಯದತ್ತರು ತಮ್ಮ ಸೌಭಾಗ್ಯವತಿಯನ್ನು ಕುರಿತು ಕಲಾತ್ಮಕವಾಗಿ ಹಾಡಿದ್ದಾರೆ. ಬೇಂದ್ರೆಯವರ 'ಸಖೀಗೀತ' ಮತ್ತು 'ಮೇಘದೂತ' ಕವನ ಸಂಕಲನಗಳು ಪತಿ-ಪತ್ನಿ ಸಂಬಂಧದಲ್ಲಿಯ ಮೈಲಿಗಲ್ಲುಗಳು.

**'ಬೇಂದ್ರೆಯವರ ಸಖೀಗೀತ'**

ಬೇಂದ್ರೆಯವರು ಕನ್ನಡ ಭಾವಗೀತೆ ಪ್ರಪಂಚದಲ್ಲಿ ತಮ್ಮ ಕವಿಪ್ರತಿಭೆಯನ್ನು ಮಿಂಚಿ ಮೆರೆದವರು. ಕನ್ನಡ ಕಾವ್ಯಲೋಕದಲ್ಲಿ ಇವರಷ್ಟು ಭಾವತೀವ್ರತೆ ಉಳ್ಳವರು ತುಂಬಾ ವಿರಳ. ಕನ್ನಡ ಭಾಷೆಯ ಜೀವಸತ್ವವನ್ನು ತನ್ನವಾಗಿಸಿಕೊಂಡು ಜೀವನದಲ್ಲಿ ಪಟ್ಟಪಾಡನ್ನೆಲ್ಲ ಹಾಡಾಗಿ ಮಾಡಿದ ಮಹಾಮಾಂತ್ರಿಕ. ಜೀವನದ ಕಷ್ಟಕಾರ್ಪಣ್ಯ, ಕಹಿ-ಸಿಹಿಗಳನ್ನು ಬೇಂದ್ರೆಯವರಂತೆ ಕಾವ್ಯದಲ್ಲಿ ತಂದವರು ಬೆರಳೆಣಿಕೆಯಷ್ಟು. ತಮ್ಮ ಕೌಟುಂಬಿಕ ಅನುಭವ, ಪ್ರೇಮ ಪ್ರಕರಣ, ಗೆಳೆತನ, ಬದುಕಿನ ಒಂಟಿತನ, ನಿರಾಶೆ, ಆದರ್ಶಗಳನ್ನು ಕಾವ್ಯವಸ್ತುವನ್ನಾಗಿ ಮಾಡಿಕೊಂಡು ಆತ್ಮನಿವೇದನೆಗೆ ಕಾವ್ಯದಲ್ಲಿ ಸ್ಥಾನವನ್ನು ತಂದುಕೊಟ್ಟವರು ಬೇಂದ್ರೆ. ಅಂತಹ ಒಂದು 'ಸಖೀಗೀತ'ವನ್ನು ಆತ್ಮಚರಿತ್ರದ ಅದರಲ್ಲಿಯೂ ಕಾವ್ಯಪ್ರಕಾರದಲ್ಲಿ ನಮ್ಮೆಲ್ಲರ ಮುಂದೆ ತಂದುದು ಅವರ ವೈಶಿಷ್ಟ್ಯವೇ ಸರಿ.

ಬೇಂದ್ರೆಯವರು ತನ್ನ ಪತ್ನಿಯನ್ನು 'ಸಖಿ' ಎಂದು ಕರೆದು 'ಸಖೀಗೀತ'ವನ್ನು ರಚಿಸಿದ್ದಾರೆ. ಈ ಸಖ-ಸಖಿ ಭಾವ ದಂಪತಿಗಳ ಸ್ನೇಹಭಾವನ್ನು ಸುಖ-ದುಃಖವನ್ನು ಹಂಚಿಕೊಂಡು ಜೀವನವನ್ನು ನಡೆಸುತ್ತಿದ್ದ ಅವರ ಹರ್ಷ ಜೀವನೋಲ್ಲಾಸವನ್ನು

ಸೂಚಿಸುತ್ತದೆ. ಬೇಂದ್ರೆಯವರು ಹೆಣ್ಣಿನ ಮೃದು ಭಾವ ಮತ್ತು ಆಕೆಗೆ ಸಮಾಜದಲ್ಲಿ ನೀಡಬೇಕಾದ ಸ್ಥಾನವನ್ನು ಅರಿತವರಾಗಿ ಸಮಾಜಕ್ಕೆ ಆ ಮುಖದ ಸತ್ಯವನ್ನು ದರ್ಶಿಸುತ್ತ ದಂಪತಿಗಳ ಪರಸ್ಪರ ಅರಿವಿನೊಡನೆ ಸಮಾಜ ವಿಕಾಸವಾಗಬೇಕೆಂದು ಕನಸು ಕಂಡರು. ಆದ ಕಾರಣ ತಮ್ಮ ದಾಂಪತ್ಯದ ನೋವು–ನಲಿವು, ಸ್ನೇಹ, ಪ್ರೇಮ, ಸೋಲು–ಗೆಲುವು, ಆತಂಕ–ಉಲ್ಲಾಸವನ್ನು ಸಖ–ಸಖಿ ಭಾವದಿಂದ 'ಸಖೀಗೀತ'ದಲ್ಲಿ ವಿಶ್ಲೇಷಿಸಿದ್ದಾರೆ. ಅಲ್ಲಿಯವರೆಗೂ ಯಾವ ಕನ್ನಡದ ಕವಿಯೂ ತನ್ನ ಬಗ್ಗೆ ಇಷ್ಟೊಂದು ನೇರವಾಗಿ ಆತ್ಮನಿವೇದನೆಗೆ ತೊಡಗಿರಲಿಲ್ಲ. ಜೀವನಕ್ಕೂ ಕಾವ್ಯಕ್ಕೂ ಎಂದಿಗೂ ವ್ಯತ್ಯಾಸ ಕಾಣದ ಬೇಂದ್ರೆಯವರಿಗೆ ದೈನಂದಿನ ಎಲ್ಲಾ ವ್ಯವಹಾರಗಳೂ ಕಾವ್ಯದ ವಸ್ತುವಾಗುತ್ತಿದ್ದವು.

'ಸಖೀಗೀತ' ಬೇಂದ್ರೆಯವರ ನಾಲ್ಕನೆಯ ಕವನ ಸಂಕಲನ. ಅದು ಪ್ರಕಟವಾದದ್ದು ೧೯೩೭ ರಲ್ಲಿ. ಇದೊಂದು ವಿಸ್ತಾರವಾದ ಖಂಡಕಾವ್ಯವಾಗಿದೆ. ಮೂವತ್ತು ಕವಿತೆಗಳ 'ಸಖೀಗೀತ'ದಲ್ಲಿ 'ಸಖೀಗೀತ'ವೇ ದೀರ್ಘವಾದ ಕಾವ್ಯ. ಕಾವ್ಯ, ಬಂಧ ಭಾಷೆ, ಲಯಗಳ ದೃಷ್ಟಿಯಿಂದ ಈ ಕಾವ್ಯ ಪ್ರಪಂಚದಲ್ಲಿಯೇ ನೂತನ ಆವಿಷ್ಕಾರವಾಗಿದೆ. 'ಸಖೀಗೀತ' ಒಂದು ಬದುಕಿನ ಆಖ್ಯಾನವಾದರೂ ಅದು ಸಾಂಸ್ಕೃತಿಕ ಮಹತ್ವವುಳ್ಳ ಕವನ. ಈ ಕವನ ಸ್ತ್ರೀ ಸಂವೇದನೆಯ ದೃಷ್ಟಿಯಿಂದಲೂ ಮುಖ್ಯವಾಗುತ್ತದೆ. ಕವಿಯೇ ತಮ್ಮ ಮುನ್ನುಡಿಯಲ್ಲಿ ಹೇಳುವಂತೆ ಇದರಲ್ಲಿರುವಂತೆ ಇತರ ಹನ್ನೆರಡು ಕವನಗಳು 'ಸ್ತ್ರೀ' ಭಾವದ ವಿವಿಧ ಮುಖಗಳನ್ನು ವಿವರಿಸುತ್ತದೆ. 

"'ಸಖೀಗೀತ'ದಲ್ಲಿ ನನ್ನ ಜೀವನ ಕಥೆಯ ಹಂದರದ ಮೇಲೆ ಸಾಮಾನ್ಯ ಸಂಸಾರ ಸುಖ–ದುಃಖದ ಹಂಬನ್ನು ಹಬ್ಬ ಬಿಟ್ಟಿದ್ದೇನೆ. ಭಾರತೀಯರ ಜೀವನದಲ್ಲಿಯೂ, ಕಾವ್ಯದಲ್ಲಿಯೂ ದಾಂಪತ್ಯ ಪ್ರಣಯಕ್ಕೆ ಸ್ಥಾನವಿಲ್ಲ. ಕಾವ್ಯದಂತೆಯೇ ಜೀವನದಲ್ಲಿಯೂ ಪ್ರಣಯದ ವಿಲಾಸವು ವೇಶ್ಯಾವಾಟಿಕೆಯ ಆವರಣದಲ್ಲಿ ಮಿಂಚಾಡುವುದು. ಪಾಶ್ಚಿಮಾತ್ಯರ ಜೀವನದಲ್ಲಿಯೂ ಅವರ ಕಾವ್ಯದಲ್ಲಿಯೂ ಪ್ರಣಯಾರಾಧನ ವಿಧಿಗೆ ನಿಶ್ಚಿತವಾದ ಕ್ರಮವಿದೆ ಎಂದು ಹೇಳುವುದುಂಟು. ಆದರೆ, ಈ ವಿಧಾನವು ಸಂಪೂರ್ಣವಾಗಿ ಸತ್ಯವಲ್ಲ. ಯಾವ ವಿಧಿ ಕ್ರಮಗಳು ಅಲ್ಲಿ ಇಲ್ಲಿ ಇರಲಿ ಬಿಡಲಿ, ಮಾನವನ ಅವಿವೇಕ ಸುಳಿದಾಡಿದಲ್ಲೆಲ್ಲ ಪ್ರೇಮದ ಕೊಲೆಯು ಅಯಾಚಿತವಾಗಿ ನಡೆಯುವುದು, ಪಾಶ್ಚಿಮಾತ್ಯರ ಪ್ರಣಯ ಲೀಲೆಯ ಕೊನೆಗೆ ಬರುವ ಮದುವೆಯಲ್ಲಿ ವಿಯೋಗದ ಲಕ್ಷಣವು, ವಿರಹದ ಚಿತ್ರವು, ಪ್ರೇಮದ ಸಮಾಧಿಯು ಕಟ್ಟಿಹೋಗಿದ್ದುಂಟು... ಅಗ್ನಿಸಾಕ್ಷಿಯಾಗಿ, ದಾನವಾಗಿ ಬಂದ ಕನ್ಯೆಯಾಗಿ ಸ್ನೇಹದ ಅಭ್ಯಾಸದಿಂದ ಸುಖ ದುಃಖಗಳಲ್ಲಿ ಸಮಭಾಗಿಯಾಗುವ ಸಹಾನುಭೂತಿಯ ಅಂತಃಕರಣದಿಂದ ಸಖಿಯನ್ನಾಗಿ ಮಾಡುವ ಕ್ರಮವೊಂದು ಎಡೆಬಿಡದೆ ಸಾಗಿರುವುದು. ಆ

ಕ್ರಮದಲ್ಲಿ ಸ್ನೇಹದ ವಿವಿಧ ರೂಪಗಳು ತಮ್ಮ ತಮ್ಮ ಪಾತ್ರವನ್ನಾಡಿ ನಾಯಕ ಪಾತ್ರಕ್ಕೆ ರಸಭಾವಗಳ ಪ್ರಭಾವಲಯವನ್ನು ಕಟ್ಟುವವು. ಅಂತಹ ಚಿತ್ರವೊಂದು ಸಖೀಗೀತದಲ್ಲಿದೆ"[5]. ಹೀಗೆ ಹೇಳಿ ಬೇಂದ್ರೆಯವರು 'ಸಖೀಗೀತ'ದ ವೈಯಕ್ತಿಕ ಮತ್ತು ಸಾಮಾಜಿಕ ಮುಖಗಳೆರಡನ್ನೂ ಒಮ್ಮೆಲೇ ತೆರೆದುತೋರಿದ್ದಾರೆ. 'ವಿಧಿ ತಂದ ವಧು'ವನ್ನು ಸ್ನೇಹಿತಳನ್ನಾಗಿಸಿಕೊಂಡು ಬಾಳುವೆ ಮಾಡಿದ ಆತ್ಮಕಥೆಯನ್ನು ಕಾವ್ಯವಾಗಿ ಚಿತ್ರಿಸಿದರು.

ಬೇಂದ್ರೆಯವರು ವಿವಾಹ ಸಂದರ್ಭದಲ್ಲಿ ಅಂತಃಪಟದಾಚೆ ನಿಂತಿರುವ ವಧುವನ್ನು ಕಾಣುವುದು– ಆ ಮಧುರ ಭಾವದ ಆಹ್ಲಾದದಿಂದ ಪ್ರಕೃತಿ ಸಹಜವಾಗಿ 'ಬೆವರಿನ ಬಾಸಿಂಗ' ಕಟ್ಟಿಕೊಂಡ ಬೆವರಿನ ಹನಿಯೊಂದನ್ನು ಮೂಗುಬಟ್ಟಾಗಿ ಧರಿಸಿದ ಸೌಂದರ್ಯದಲ್ಲಿ,

"ಮುತ್ತಿಗು ಮಿಗಿಲಾಗಿ ಹೂವಿಗು ಹಿರಿದಾಗಿ
ಬೆವರ್ಹನಿ ಬಾಸಿಂಗ ತುಳುಕುತಿರೆ
ನತ್ತನು ನಾಚಿಸಿ ಬೆವರಿನ ಹನಿಯೊಂದು
ಮೂಗುಬಟ್ಟಿನ ಅಂದ ಮಿನುಗುತಿರೆ" (ಸಖೀಗೀತ)

ಹೀಗಾಗಿ ಕವಿಯು ತನ್ನ ಪ್ರಿಯ ಸಖಿಯು ಭೌತಿಕ ಒಡವೆಗಳಿಂದ ಶೃಂಗಾರಗೊಂಡಿರುವುದಕ್ಕಿಂತ ನಿಸರ್ಗ ಸಹಜ ಸೌಂದರ್ಯದಲ್ಲಿ ಮಿಂಚಿರುವುದನ್ನು ಕಂಡು ಬಣ್ಣಿಸಿರುವುದು ಅವರ ಸಖೀಭಾವವನ್ನು ತೋರುತ್ತದೆ.

ಬೇಂದ್ರೆಯವರು ದಾಂಪತ್ಯದ ಮಧುರ ಸಂಬಂಧವನ್ನು ಸ್ಮೃತಿಯಾಗಿಸುವುದನ್ನು ಈ ಕಾವ್ಯದ ಮುಖ್ಯ ಉದ್ದೇಶವಾಗಿಸಿದ್ದಾರೆ. 'ಸಖೀಗೀತ' ಹೆಸರೇ ಹೇಳುವಂತೆ ಇದೊಂದು ಸಖ್ಯದ ಆಖ್ಯಾನವಾದರೂ ಇಲ್ಲಿ ನಾಯಕನೇ ಕೇಂದ್ರಸ್ಥಾನದಲ್ಲಿರುವುದು. ಕವಿಯೇ ತಮ್ಮ ಜೀವನದ ಸುಖ ದುಃಖಗಳ ಹಂದರದ ಮೇಲೆ ಸಾಮಾನ್ಯ ಸಂಸಾರದ ಸುಖ ದುಃಖದ ಹಂಬನ್ನು ಹಬ್ಬ ಬಿಟ್ಟಿರುವುದಾಗಿ ಹೇಳಿಕೊಂಡಿರುವುದರಿಂದ ಈ ಕಾವ್ಯದಲ್ಲಿ ಕವಿಯೇ ನಾಯಕ ಹಾಗೂ ಆತನೇ ಆಖ್ಯಾಯಕ ಕೂಡ. ಇದು ಮೇಲ್ನೋಟಕ್ಕೆ ಸಖಿಯೊಂದಿಗೆ ಬೆಳೆದ ತನ್ನ ಉದ್ದ ಬದುಕಿನ ನೆನಪಿನ ತಾಣಗಳ ಸ್ಮರಣ ಸಂಘಟನೆಯಾದರೂ ಇದರಲ್ಲಿ ಬರುವ ಇನ್ನೂರಕ್ಕೂ ಹೆಚ್ಚು ಸಾಲುಗಳು ವೈವಾಹಿಕ ಚೌಕಟ್ಟನ್ನು ಮೀರಿ ಪ್ರಕೃತಿಯ ಸಾನಿಧ್ಯದಲ್ಲಿ ನಾಯಕ ತನ್ನ ಸೃಜನಶೀಲತೆಯನ್ನು ಕಂಡುಕೊಳ್ಳುವ ಕ್ರಿಯೆಯನ್ನು ಬಿಡಿಸಿ ಹೇಳುತ್ತದೆ. ಸಾಮಾನ್ಯವಾಗಿ ಎಲ್ಲರ ವೈವಾಹಿಕ ಜೀವನಗಳಲ್ಲಿ ಸುಖ ದುಃಖ, ನೋವು–ನಲಿವುಗಳು ಇದ್ದದ್ದೇ. ಇಲ್ಲಿ ಬರುವ ಎಷ್ಟೋ ಅನುಭವಿಗಳು ಸಹ ಬೇರೆಯವರ ಜೀವನದಲ್ಲೂ ಇರುವ ಸಾಧ್ಯತೆಗಳು ತುಂಬಾ ಇವೆ. ಕವಿ ತನ್ನ ಪ್ರತಿಭೆಯಿಂದ ಅದನ್ನು ಕಾವ್ಯದಲ್ಲಿ ಅಭಿವ್ಯಕ್ತಿಸಲು ಸಾಧ್ಯವಾಗುವುದು ತನ್ನ ಕಾವ್ಯಶಕ್ತಿಯ ಮೂಲಕ.

ಸಖೀಗೀತದ ಮೊದಲ ಭಾಗವು ವೈಯಕ್ತಿಕ ದಾಂಪತ್ಯ ಬದುಕನ್ನು ಚಿತ್ರಿಸುತ್ತದೆ. ನಾಯಕನು ತನ್ನ ಪತ್ನಿಯನ್ನು ಸಂಬೋಧಿಸಿ ಮಾತನಾಡುತ್ತಿದ್ದಾನೆ. ಕವನದ ವಸ್ತು 'ನಮ್ಮ ಸಖ್ಯದ ಆಖ್ಯಾನ'

"ಸಖೀ ನಮ್ಮ ಸಖ್ಯದ ಆಖ್ಯಾನ ಕಟುಮಧುರ
ವ್ಯಾಖ್ಯಾನದೊಡಗೂಡಿ ವಿವರಿಸಲೇ
ಕರುಳಿನ ತೊಡಕನ್ನು ಕುಸುರಾಗಿ ಬಿಡಿಸಿಟ್ಟು
ತೊಡವಾಗಿ ತಿರುಗೊಮ್ಮೆ ನಾ ಧರಿಸಲೇ"

(ಸಖೀಗೀತ, ಪುಟ. ೦೫)

ಮೇಲಿನ ಈ ಸಾಲುಗಳಲ್ಲಿ 'ಕುಸುರಾಗಿ' ಮತ್ತು 'ತೊಡವಾಗಿ' ಶಬ್ದಗಳು ಕಾವ್ಯಕಲೆಯ ಕುಶಲತೆಯತ್ತ ಬೊಟ್ಟು ಮಾಡಿ ತೋರಿಸುತ್ತವೆ. ಇದರ ಜೊತೆಗೆಯೇ, ಕವಿಗೆ ತನ್ನ ಕವಿಧರ್ಮವನ್ನು ಪಾಲಿಸುವುದೂ ಮಹತ್ವದ್ದೆನಿಸಿದೆ. ಈ ಕವಿಧರ್ಮದ ಸ್ಪಷ್ಟವಾದ ಕಲ್ಪನೆಯನ್ನು ಬೇಂದ್ರೆಯವರು ಅನೇಕ ಸಂದರ್ಭಗಳಲ್ಲಿ ವಿವರಿಸಿದ್ದಾರೆ. 'ನಾದಲೀಲೆ'ಯ 'ಅರ್ಪಣ' ಎಂಬ ಕವನದಲ್ಲಿಯೂ ಇದೇ ಭಾವವನ್ನು ವ್ಯಕ್ತಪಡಿಸುತ್ತಾರೆ.

"ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೆ
ನೀಡುವೆನು ರಸಿಕ! ನಿನಗೆ"

ಸಖೀಗೀತದಲ್ಲಿ ಈ ರೀತಿ ವ್ಯಕ್ತಪಡಿಸಿದ್ದಾರೆ.

"ಪಟ್ಟಪಾಡೆಲ್ಲವೂ ಹುಟ್ಟು ಹಾಡಾಗುತ
ಹೊಸದಾಗಿ ರಸವಾಗಿ ಹರಿಯುತಿದೆ"

(ಸಖೀಗೀತ, ಪುಟ–೦೫)

ಎಂದು ಹೇಳುವಾಗ ತಾನು ಈ ಕವಿಧರ್ಮವನ್ನು ಪಾಲಿಸಿದ್ದೇನೆ ಎಂಬ ತೃಪ್ತಿ ಕವಿನಾಯಕನಲ್ಲಿದೆ. ಪಟ್ಟಪಾಡನ್ನೆಲ್ಲ ಹಾಡಾಗಿಸುವುದರೊಂದಿಗೆ ಕಾವ್ಯರಸವಾಗಿ ಹರಿಯುತ್ತ ಸಹೃದಯನ ಆನಂದಕ್ಕಾಗಿ ತನ್ನ ಕಾವ್ಯವಿದೆ ಎಂಬುದನ್ನು ಹೇಳಿದ್ದಾರೆ.

"ಪ್ರಾಸ್ತಾವಿಕ ಭಾಗದಲ್ಲಿ ಕವಿ ತನ್ನ ಕವಿಧರ್ಮವನ್ನು ಸೂಚಿಸಿದಂತೆ ತನ್ನ ನಂಬಿಗೆಯನ್ನೂ ಚರ್ಚಿಸಿದ್ದಾನೆ. ವರ್ಡ್ಸ್‌ವರ್ತ್‌ನಂತೆ ಬೇಂದ್ರೆಯವರೂ ಹೃದಯದ ಪಾವಿತ್ರ್ಯವನ್ನು ಎತ್ತಿಹಿಡಿದಿದ್ದಾರೆ. ದೀರ್ಘ ಅಂತರ್ಯಾನಕ್ಕೆ ಸಖಿಯನ್ನು ಆಹ್ವಾನಿಸುವ ಪೂರ್ವದಲ್ಲಿ

"ಸುಖದುಃಖ ಸಂಗಮವಾದ ಹೃದ್ರಂಗವು
ಪಾವನವೆಂಬೆನು ಯಾವಾಗಲೂ"

ಎಂದು ಘೋಷಿಸುವುದರಲ್ಲಿ ಎಂಥ ಔಚಿತ್ಯವಿದೆಯನ್ನೆವುದನ್ನು ವಿವರಿಸುವ ಅಗತ್ಯವಿಲ್ಲ.

"ಸಪ್ಪೆಬಾಳುವೆಗಿಂತ ಉಪ್ಪುನೀರೂ ಲೇಸು
ಬಿಚ್ಚು ಸ್ಮೃತಿಗಳ ಹಾಯಿ ಬೀಸೋಣ ಬಾ"

ಎಂಬ ಕರೆಯಲ್ಲಿ ಅಂತರ್ಯಾನದ ಸಾಹಸದ ಸೂಚನೆಯಿದ್ದರೂ ಆನಂದದ ಉತ್ಸಾಹವಿಲ್ಲ.

"ತಾಂಡವ ನಡೆಸಿದ ಝುಂಝಾವಾತದ
ಕಾಲನ ಹುಲುಗೆಜ್ಜೆ ನಾವಾಗಿರೆ"

ಎಂಬ ಸಾಲುಗಳು ನಾಯಕ ನಾಯಿಕೆಯರ ಅವಸ್ಥೆಯ ದಾರುಣತೆಯನ್ನೇ ಎತ್ತಿ ತೋರಿಸುತ್ತವೆ."[೫]

ನಾಯಕನ ಸ್ಮೃತಿ ವೃತ್ತಾಂತ ಮದುವೆಯ ದಿನದಂದೇ ಪ್ರಾರಂಭವಾಗುತ್ತದೆ. ನಿಸರ್ಗವೇ ಮದುವೆಯಾಗಿ ಸಂಭ್ರಮಗೊಂಡಿದೆ. ಈ ಮದುವೆಯ ವರ್ಣನೆಯಲ್ಲಿ ಮುಂಬರುವ ಸಂಕಟಗಳ ಯಾವ ಸೂಚನೆಯೂ ಇಲ್ಲ.

೧೯೧೯ರ ಫಾಲ್ಗುಣದಲ್ಲಿ–

"ಮಾಂದಳಿರ ತೋರಣ ಹೂಮಿಡಿ ಗುಡಿಗಟ್ಟಿ
ಮಧುಮಾಸ ಹೊರಟಿತ್ತು ನಿಬ್ಬಣಕೆ"

(ಸಖೀಗೀತ ಪುಟ.೨)

"ಏನು ಸಂಭ್ರಮವದು! ಹರೆಯದ ಹಬ್ಬವು
ಕನಸು ಮನಸೂ ಹೆಣೆದು ಬೆಳೆಬೆಳೆದವಳೇ"

(ಪುಟ. ೦೩)

ತನ್ನ ಸಖಿ ತನು ಮನ ಧನಗಳಲ್ಲಿ ಪಾಲು ಬೇಡಲು ಬಂದವಳಲ್ಲ. ಅವುಗಳನ್ನು ಸಮೃದ್ಧಗೊಳಿಸಲು ಬಂದವಳು. ವಿವಾಹದ ನಂತರದ 'ಹರೆಯದ ಹಬ್ಬ'ದ ಸಂಭ್ರಮದಲ್ಲಿ ಮೈಮರೆತ ನಾಯಕ ನಾಯಕಿಯರಿಗೆ ಕಾಲದ ಪರಿವೆಯೇ ಇರುವುದಿಲ್ಲ ಎನ್ನುವುದು ಗಮನಾರ್ಹ. ಈ ಸಂಭ್ರಮದ ಒಂದು ಆಳವಾದ ಅಭಿವ್ಯಕ್ತಿ ಮುಂದಿನ ಸಾಲುಗಳಲ್ಲಿವೆ.

'ಹಗಲೆಲ್ಲೋ ಹಾರಿದವು ಇರುಳೆಲ್ಲಾ ಜಾರಿದವು
ಋತುನಿದ್ದೆ ಮಾಡಿದವು ಬುಗುರಿಯೊಲೇ'

(ಪುಟ. ೦೩)

ಹಗಲು ಹಾರಿದವಂತೆ ಇರುಳು ಜಾರಿದವಂತೆ, ಅಷ್ಟು ವೇಗವಾಗಿ ದಿನಗಳೋಡುತ್ತಿವೆ. ಋತುಗಳು ಉರುಳಿದ್ದನ್ನು ಬುಗುರಿಗೆ ಅನ್ವಯಿಸಿ ಹೇಳಿರುವುದು ಅರ್ಥಪೂರ್ಣವಾಗಿದೆ.

"ಆಟದ ಕನ್ನಿಕೆ ಮಂಗಳ ಲಗ್ನಕೆ
ಮಾಲೆಯನ್ನಿಕ್ಕುತ ಮಡದಿಯಾದೆ
ನಾಟಿಸಿ ಕಣ್ಣೋಟ ಸೋಕಿಸಿ ಕೈಬೆರಳು
ಮರವಟ್ಟ ಮನ–ಬನ ಚಿಗುರಿಸಿದೆ."

ಮೇಲಿನ ಸಾಲುಗಳು ಸಖಿಯ ಚಿಕ್ಕ ವಯಸ್ಸು, ಅವಳ ಮುಗ್ಧತೆ, ಸ್ಪರ್ಶ ಎಲ್ಲವೂ ಸಖನಲ್ಲಿ ಉಂಟುಮಾಡಿದ ರೋಮಾಂಚನವನ್ನು ವ್ಯಕ್ತಪಡಿಸುತ್ತದೆ. ವಿವಾಹದ ನಂತರ ಪತಿ–ಪತ್ನಿಯರ ಪ್ರಣಯ, ಅವರು ಪಟ್ಟ ಸಂತಸ ಪದಪದಗಳಲ್ಲಿಯೂ ಹೂವಿನ ಮಕರಂದದಂತೆ ಕಂಪಿಸುತ್ತದೆ.

"ನೀನು ದೊಡ್ಡವಳಾದೆ ಮೈಸಲಿಗೆ ಬೆಳೆಸಿದೆ
ಏಕಾಂತ ಕೆಳಸಿದೆ ಎಲೆ–ಕೆಳದಿಯೆ
ಏನು ಸಂಭ್ರಮವದು! ಹರೆಯದ ಹಬ್ಬವು
ಕನಸು ಮನಸೂ ಹೆಣೆದು ಬೆಳೆಬೆಳೆದೆವೇ". (ಪುಟ. ೦೭)

ಈ ಮೇಲಿನ ಸಾಲುಗಳು ಅವಳು ಅವನನ್ನು ಸೆಳೆದ ರೀತಿ ಮಾತಿನಿಂದೊಡಗೂಡಿದ ಆಕರ್ಷಣೆಯಾಗಿದೆ. ಜೊತೆಗೆ ಅವಳು ಎಳೆಯ ಸ್ನೇಹಿತೆ ಎಂಬುದನ್ನು ಧ್ವನಿಸುತ್ತದೆ.

ಸಖಿ ಚೊಚ್ಚಲ ಬಸಿರಿಯಾದುದನ್ನು ಕುರಿತು ಕವಿ ಹೀಗೆ ಹೇಳುತ್ತಾರೆ.

"ನೆನೆಕೊನೆ ಕಾತಿತು ಅತ್ತೆಯ ಸೊಸೆಮುದ್ದು
ಚೊಚ್ಚಿಲ ಬಸಿರಿ ನೀ ಎದೆತೆರೆದೆ" (ಪುಟ. ೦೭)

ನೆನೆಕೊನೆ ಕಾತಿತು ಎನ್ನುವುದು ಗರ್ಭಧಾರಣೆಯನ್ನು, ಎದೆತೆರೆದೆ ಎನ್ನುವುದು ಮಗುವಿಗೆ ತಾಯಿ ಹಾಲುಣಿಸಲು ಪ್ರಕೃತಿ ಮಾಡುವ ಸಿದ್ಧತೆ, ನಿರೀಕ್ಷೆಗಳನ್ನು ಧ್ವನಿಸುತ್ತವೆ.

ಸಖ ಹೆತ್ತ ಮಗು ಹೆಚ್ಚು ದಿನ ಉಳಿಯದೆ ಸತ್ತಾಗ ಸಖಿಗೆ ಬದುಕಿನ ಕ್ರೂರತೆ ಪರಿಚಯವಾಗುತ್ತದೆ. ಆಗ ಅವರಿಬ್ಬರೂ ನೊಂದ ರೀತಿ :

"ಬೆರಗಾದೆ ಬೆಪ್ಪಾದೆ ನಮ್ಮಿಬ್ಬರ ಅಳಲು
ಮೌನ ಮೀಟಿದ ಹಾಗೆ ನರಳುತಿರೆ"

ಎಂಬಲ್ಲಿ ದಂಪತಿಗಳ ಮೌನದ ಮೊದಲ ಪರಿಚಯವಾಗುತ್ತದೆ. ಅವಳ ನೋವೆಲ್ಲ ಮೌನವಾಗುತ್ತ ಸಾಗಿ, ಮುಂದೆ ಮೌನವೇ ಅವಳ ಪ್ರತಿಮೆಯಾಗುತ್ತದೆ. ಹೀಗೆ ಚೊಚ್ಚಲ

ಮಗು ಕ್ಷೇಮೇಂದ್ರನನ್ನು ಕಳೆದುಕೊಂಡು ಕಾಲ ಸಾಗುತ್ತದೆ ಅನ್ನುವಷ್ಟರಲ್ಲಿ ಮರುಚಲ ಬಸುರಿಯಾಗಿ ಅತ್ತೆಗೆ ಅವಳು ಪ್ರಿಯಳಾಗುತ್ತ ಮನೆಯ ಜ್ಯೋತಿಯನ್ನು ಬೆಳಗಿಸುವವಳಾದಳು ಎನ್ನುವ ಸಂತಸದ ದಿನಗಳಲ್ಲಿಯೇ ಅವರಿಗೆ ಆಸರೆಯಾಗಿದ್ದ ತಾಯಿ ಅಂಬವ್ವ ತೀರಿಕೊಳ್ಳುತ್ತಾಳೆ. ಅದನ್ನು ಕವಿ ;

'ಕನಸಿಗೂ ಹೊಳೆಯದ ಬರಸಿಡಿಲೆರಗಿತು
ತಾಯಿಗಿಡವು ಮಾಯವಾಯಿತಲೇ'

ಎಂದಿದ್ದಾರೆ. ತನ್ನ ತಾಯಿ ಹಾಗೂ ಮಗುವನ್ನು ಕಳೆದುಕೊಂಡ ನಾಯಕನ ಮನಸ್ಸು ವಿಚಲಿತವಾಗುತ್ತದೆ. 'ಒಲವಿಗೆ ಹುಡುಕಾಡಿ ಬಾಳಿಗೆ ಮಿಡುಕಾಡಿ ಷಡ್ರಸ ನವರುಚಿ ನೋಡಿದೆ' ಎನ್ನುವ ಮಾತುಗಳಲ್ಲಿ ನಾಯಕ ನೆಲೆ ತಪ್ಪಿದ ಹಕ್ಕಿಯಂತೆ ಹತ್ತು ದಿಕ್ಕಿಗೂ ಹಾರಾಡುವ ಅನುಭವವಾಗುತ್ತದೆ. ಈ ರೀತಿ ಅವನ ದುಃಖ ದುಮ್ಮಾನಗಳು ಕಾವ್ಯದ ರೂಪದಲ್ಲಿ ಬಿಚ್ಚಿಕೊಳ್ಳುತ್ತದೆ.

ತಾಯಿ ಸತ್ತ ವರ್ಷವೇ ಹುಟ್ಟಿದ ಎರಡನೆಯ ಮಗ ರಾಮ. ಕವಿ, ಕವಿಪತ್ನಿ ಇಷ್ಟೇ ಜನ ಇದ್ದರೂ ಮತ್ತೆ ಅವರ ಜೀವನದಲ್ಲಿ ಸಿಟ್ಟು, ಕೋಪ, ಕಷ್ಟ-ನಷ್ಟಗಳು ಸಂಭವಿಸುತ್ತವೆ. ಇದಕ್ಕೆ ಅತಂತ್ರ ಆರ್ಥಿಕ ಪರಿಸ್ಥಿತಿ ಕಾರಣವಾಗಿದೆ. ಈ ಅರಿವು ಇಬ್ಬರಲ್ಲೂ ಇದ್ದರೂ, ಅವರಿಗೆ ದುಃಖಪಡುವುದು ತಪ್ಪಲಿಲ್ಲ. 'ಬಲುಮೆಯ ಒಲುಮೆ'ಯಲಿ ಅವರು ಗಟ್ಟಿಯಾಗುತ್ತಾರೆ. ಕಣ್ಣೀರಿನಲ್ಲಿ ಕೈತೊಳೆಯುವುದು ಸಾಮಾನ್ಯವಾಗುತ್ತದೆ. ಈ ಎಲ್ಲಾ ಕಷ್ಟಗಳಿಗಿಂತ ಉಕ್ಕಿನಂತೆ ಅವರ ಜೀವನ ಗಟ್ಟಿತನವನ್ನು ಪಡೆದುಕೊಳ್ಳುತ್ತದೆ.

"ಇದ್ದಷ್ಟು ದಿನವಾರೆ ಇರುವಷ್ಟು ಪ್ರೀತಿಯ
ಇನ್ನಷ್ಟು ರುಚಿನೋಡಿ ಹೋಗುವುದೇ
ಬಿದ್ದಕಾಲಕೆ ಹಾದಿ ಹಿಡಿದದ್ದೆ ನಡುಬೀದಿ
ಎನ್ನುವರಂತೆಯೇ ಸಾಗಿದ್ದೇವೇ" (ಪುಟ. ೧೦)

ಹೀಗೆ ನಾಯಕನ ಬದುಕು ಸಾಗುತ್ತದೆ. ಸಖಿ ಮತ್ತೆ ಬಸುರಿಯಾಗಿ ೧೯೨೭ರಲ್ಲಿ ಮೂರನೆಯ ಮಗ ಭಾಸ್ಕರ ಹುಟ್ಟಿದ್ದು, ತೀರಿದ್ದು, ಅವರನ್ನು 'ಈಗಿತ್ತು ಈಗಿಲ್ಲ ಎಂಬೀ ಬಾಳೋ ಹಾಳೋ' ಎಂಬಂತೆ ದುಃಖಮಯವಾಗುತ್ತದೆ. ಹೇಗೋ ಅವರ ಧಾರುಣ ಬದುಕನ್ನು ಸಾಗಿಸುವಾಗ ಕವಿಗೆ 'ಸ್ವಧರ್ಮ' ಪತ್ರಿಕೆ, ಸಂಪಾದನೆ, ನಾಡಹಬ್ಬ ಆಚರಣೆಯ ಕನ್ನಡದ ಹುಚ್ಚು ಹತ್ತಿ ಸಖಿಯಿಂದ ಆತನನ್ನು ದೂರ ಮಾಡುತ್ತದೆ. ಆದರೂ, ಹಿಂದಿನ ದಿನಗಳನ್ನು ಸಖಿ ನೆನೆನೆನೆದು ಸಮಾಧಾನದಿಂದ ದಿನದೂಡುತ್ತಾಳೆ.

'ನಿನ್ನೆಡೆ ಕರೆಯುವಿ ನೀ ನನ್ನ
ಮತ್ತೆನ್ನ ಕನ್ನಡ ಕರೆವುದು ತನ್ನೆಡೆಗೆ
ಚಿನ್ನಾಟ ನನಗಿದು ನಿನಗಿದು ಅಗಲಿಕೆ
ಮೌನದರಣ್ಯಕೆ ನೀ ಬೆದರಿದೇ'

ಎಂದು ತನ್ನ ಕನ್ನಡದ ಪ್ರೀತಿಯನ್ನು ಅದನ್ನೇ ಹೆಚ್ಚಾಗಿ ಹಚ್ಚಿಕೊಂಡದ್ದನ್ನು ತಿಳಿಸುತ್ತಾರೆ.

ಬಡತನಕ್ಕೆ ಬಲಿಯಾಗಿ ಕರುಳಕುಡಿಗಳ ಸಾವನ್ನು ಕಂಡು ನೋವಲ್ಲೂ ಜೀವನ ಕಳೆಯುವ ಸಖಿಯ ಬಾಳು ಒಲೆಯ ಮೇಲೆ ಸುಟ್ಟ ಹಪ್ಪಳದ ಹಾಗೆ ಸೊರಗಿ ಹೋಗುತ್ತದೆ. ಆದರೂ, ಒಡಕಿನ ನಡುವೆಯೂ ಸತಿ–ಪತಿಯರು ಮಿಡುಕನ್ನು ಮರೆತು ದಾಂಪತ್ಯವನ್ನು ಮುಂದುವರೆಸುತ್ತಾರೆ. ಹೀಗಿರುವಾಗ ೧೯೨೮ರಲ್ಲಿ ಮಗ ಪಾಂಡುರಂಗ ಜನಿಸುವನು. ೧೯೨೯ರಲ್ಲಿ ಅವರ ಚಿಕ್ಕಪ್ಪನವರಿಂದ 'ಮಲೆನಾಡ ಸೆರಗಿನ ನೆರೆಗಿದ್ದ ಮನೆಯೊಂದು। ಮಮತೆಯ ಕುರುಹಾಗಿ ತಾ ದೊರಕಿತು।' ಅವರು ಬೆಳಗಾವಿ ಸಾಹಿತ್ಯ ಸಮ್ಮೇಳನಕ್ಕೆ ಹೋಗಿ ಅಲ್ಲಿ 'ಹಕ್ಕಿ ಹಾರುತಿದೆ' ಕವನವನ್ನು ಹಾಡಿ ನಾಡಿನ ಜನತೆಯ ಮೆಚ್ಚುಗೆಯನ್ನು ಗಳಿಸಿದರು. ನಂತರ 'ಜಯ ಕರ್ನಾಟಕ' ಪತ್ರಿಕೆಯನ್ನು ಗೆಳೆಯರ ಗುಂಪಿನಿಂದ ನಡೆಸತೊಡಗಿದರು. ಈ ಕಾಲದಲ್ಲಿ ಅವರು ತನ್ನ ಸಖಿಯೂ ಸಂತೋಷವಾಗಿರುವುದನ್ನು ಸೂಚಿಸುವಂತೆ;

"ಸುಖ ತಾನು ಬರುವಾಗ ಗುಳೆ ಎತ್ತಿ ಬರುವುದು
ಒಂದಲ್ಲ ಎರಡಲ್ಲ, ಪರಿವಾರವೆ;
ಕಂದನ ಕಿರಿಕಿರಿ ಕಿಲಿ ಕಿಲಿ ನಗುವಾಗ
ಹೊಸಮನೆ ಗಮಗಮ ಎನ್ನುತಿರೆ" (ಪುಟ. ೧೪)

ಎಂಬ ಹರ್ಷವನ್ನು ವ್ಯಕ್ತಪಡಿಸಿದ್ದಾರೆ. ಅವರ 'ಸಾಧನಕೇರಿ' ಮನೆಯಲ್ಲಿ ಆ ದಂಪತಿಗಳ ಸಂತಸದ ರಸಮಯ ಕಾಲವನ್ನು ಇದು ಸೂಚಿಸುತ್ತದೆ.

'ಅಲ್ಲಿರುತಿರಲಾಗಿ ಸಹಜವಾಗಿಯೇ ನನ್ನ
ದೃಷ್ಟಿಯ ನಟ್ಟಿತು ಸೃಷ್ಟಿಯೊಳು
ಮಳೆಯಾಕೆ ಚಳಿಯಾಕೆ ಭೂಮಿಯ ಬೆಳೆಯಾಕೆ
ಬಿಸಿಲಾಕೆ ನನ್ನಾಕೆ ನೆರೆಯಾದರು' (ಪು. ೧೬)

ಹೀಗೆ ನಿಸರ್ಗದ ಸಮ್ಮೋಹಕ್ಕೆ ಸಿಲುಕಿದ ಕವಿ ತನ್ನ ಮಡದಿಯನ್ನು ಸೃಷ್ಟಿಗೆ ಹೋಲಿಸಿ ಹೇಳಿದ್ದಾರೆ. ಬೇಂದ್ರೆಯವರು ಪ್ರಕೃತಿ ಸೌಂದರ್ಯದಲ್ಲಿ ಅವರ ಸಾಧನ ಕೇರಿಯ ಪಾತ್ರವೂ ದೊಡ್ಡದು.

ಸಖೀಗೀತದಲ್ಲಿ ಬರುವ ಸೌಂದರ್ಯ ವಿಚಾರ ಅನುಪಮವಾದದ್ದು. 'ಹೆಣ್ಣು ಗಂಡಿಗೆ ಚೆಲುವು; ಗಂಡು ಹೆಣ್ಣಿಗೆ ಒಲವು' ಈ ಸಮೀಕರಣದಲ್ಲಿ ಸತ್ಯ ಸೌಂದರ್ಯದ ಎರಕದ ನೀರಡಿಕೆಯೇ ಪ್ರೇಮವೆಂಬ ದರ್ಶನವಿದೆ. "ಚೆಲುವು-ಒಲವುಗಳ ಮೀಮಾಂಸೆಗೆ ಬೇಂದ್ರೆ ದರ್ಶನದ ಆಳಕ್ಕೆಂದು ನಮ್ಮನ್ನು ಕರೆದೊಯ್ಯುತ್ತದೆ. ಚೆಲುವನ್ನು ಹೆಣ್ಣಿಗೆ, ಒಲವನ್ನು ಗಂಡಿಗೆ ಜೋಡಿಸುವ ಕ್ರಮವನ್ನು ಕವಿ ನಾಯಕ ಒಪ್ಪುವುದಿಲ್ಲ. ಚೆಲುವು, ಒಲವುಗಳ ಪ್ರತ್ಯೇಕ ಅಸ್ತಿತ್ವವೇ ಅವನಿಗೆ ಸಮ್ಮತವಿಲ್ಲ.

'ಇದಿರಾಗಿ ಚೆಲುವಾಗಿ ಇರುವೆ ತಾನೆನುವಾಗ
ಒಲವಾಗಿ ಒಳಗಿಂದ ಹೊಮ್ಮುತ್ತಿದೆ'

ಇಂಥ ಸಾಲುಗಳಲ್ಲಿ ಚೆಲುವು ಒಲವುಗಳ ಅನ್ಯೋನ್ಯತೆಯನ್ನು ಪರಿವರ್ತನಶೀಲ ಸ್ವಭಾವವನ್ನು ಆತ ಗುರುತಿಸುತ್ತಾನೆ. ಸೌಂದರ್ಯ ತತ್ವವನ್ನು ಅದರ ಆಳದಲ್ಲಿಯೇ ಗ್ರಹಿಸುತ್ತಾನೆ."[೬]

ಕುಣಿಯೋಣು ಬಾ ಎಂದು ಪ್ರಣಯದೋಲೆಯನೊಂದು
ಎದೆವಾತಿನಿಂದೆದೆಗೆ ನಾನಟ್ಟಿದ್ದೆ
ಪ್ರತಿಭೆಯ ಗರ್ಭದ ವಿಶ್ವಕರ್ಮನ ಕರೆಸಿ
ಗಾಳಿಗೋಪುರವೊಂದು ನಾ ಕಟ್ಟಿದ್ದೆ"

(ಪು. ೨೫)

ಕವಿ ತನ್ನ ಪತ್ನಿಯ ಅಪೂರ್ವ ಸೌಂದರ್ಯಕ್ಕೆ ಮನಸ್ಸು ಕೊಟ್ಟು 'ಕುಣಿಯೋಣು ಬಾ' ಎಂದು ಪ್ರಣಯದೋಲೆಯನೊಂದನು ಎದೆವಾತಿನಿಂದೆದೆಗೆ ಕಳುಹಿಸುತ್ತಾರೆ. ಆ 'ಕುಣಿಯೋಣು ಬಾರ' ಸಖ-ಸಖಿಯನ್ನು ಕುಣಿಸಿದುದರ ಜೊತೆಗೆ ಇಡೀ ಕನ್ನಡಿಗರನ್ನು ಕುಣಿಸುತ್ತಾ ನಡೆದಿದೆ. ಅದರ ಆನಂದ ಲಹರಿ ಸದಾ ಹಸಿರಾಗಿದ್ದು, ಕನ್ನಡಿಗರ ಮನೆ-ಮನವನ್ನು ಬೆಳಗುವ ಗೀತೆಯಾಗಿದೆ. ಬೇಂದ್ರೆಯವರು ಆ ಗೀತದಲ್ಲಿ;

'ಹದಿನಾಲ್ಕು ಲೋಕಕ್ಕೆ
ಚಿಮ್ಮಲಿ ಈ ಸುಖ
ಹಿಗ್ಗಲಿ ಸಿರಿಮುಖ' ॥ಕುಣಿಯೋಣು ಬಾ॥

ಎಂದು ಹಾಡಿ ಎಲ್ಲಾ ಲೋಕಕ್ಕೂ ಕುಣಿತದ ಹಿಗ್ಗು ಚಿಮ್ಮಲಿ ಎಂದು ವಿಶ್ವದ ಆನಂದವನ್ನು ಆಶಿಸಿದ್ದಾರೆ.

ಕವಿ ತನ್ನ ಸಖಿಯನ್ನುದ್ದೇಶಿಸಿ, ಹೀಗೆಂದಿದ್ದಾರೆ.

'ಮಾತಿಗೂ ಮೌನಕು ಯಾತರ ಒಗೆತನ
ನೀರಿಗು ಕಲ್ಲಿಗು ಏನ ಜತಿ?'

ಈ ಸಾಲುಗಳಲ್ಲಿ ಸಖಿ ಮೌನಿಯಾಗುವುದು ಮತ್ತು ಕವಿ ಮಾತಿಗೆಳೆಯುವುದು ಕಂಡಾಗ ಸಂಸಾರದಲ್ಲಿ ವಿರಸ ಇಣಿಕಿಸಿರುವುದು ಗೋಚರಿಸುತ್ತದೆ.

"ಮಾತಿನಲ್ಲಿರುವಂಥ ಮೌನದ ಧ್ವನಿಯಿಂದ
ವಿಹ್ವಲತೆ ಬೆಳೆಯುವದಿಬ್ಬರಲಿ
ಇಬ್ಬರ ಮನವಾಗ ಇಬ್ಬಗೆಯಾಗುವುದು
ಒಬ್ಬಗೂ ಸುಖವಿಲ್ಲ ಬದುಕಿನಲಿ"

(ಪುಟ. ೨೬)

ವಾಮನ ಬೇಂದ್ರೆಯವರು "ದತ್ತಾತ್ರೇಯ ಲಕ್ಷ್ಮೀಬಾಯಿ ದಾಂಪತ್ಯವೆಂದರೆ, ಮಾತು-ಮೌನಗಳ ದಾಂಪತ್ಯವಾಗಿತ್ತು. ಮಾತು ಮತ್ತು ಮೌನ ವಿರುದ್ಧ ಪದಗಳಾಗಿ ಕಂಡರೂ ಅವು ಪರಸ್ಪರ ಪೋಷಕ ಶಕ್ತಿಗಳು. 'ಮಾತು ಮೌನದ ಪ್ರತಿಮೆ, ಮೌನ ಮಾತಿನ ದೈವ' ಎಂಬುದನ್ನು ಮರೆಯುವಂತಿಲ್ಲ"[2] ಎನ್ನುತ್ತಾ ನನ್ನ ತಂದೆ-ತಾಯಿಗಳ ಸಂಬಂಧ ಮಾತು-ಮೌನಗಳ ಸಂಬಂಧದಂತಿತ್ತು ಎಂದಿದ್ದಾರೆ.

ಹೀಗೆ ಅಪ್ಪಾಭಟ್ಟರಂತಹ ಮಹಾನ್ ವೈದಿಕ ವಿದ್ವಾಂಸರ ಮನೆಯಲ್ಲಿ ಹುಟ್ಟಿದಂತಹ ಬೇಂದ್ರೆಯವರು 'ಶಬ್ದಬ್ರಹ್ಮ'. ಸಂಪ್ರದಾಯಸ್ಥ ಸುಸಂಸ್ಕೃತ ಮನೆಯಲ್ಲಿ ಹುಟ್ಟಿದ ಲಕ್ಷ್ಮೀಬಾಯಿಯವರು ಮುಗ್ಧೆ, ಕುಟುಂಬ ವತ್ಸಲೆ. ಹಾಗಾಗಿ ತಾಯಿ ಲಕ್ಷ್ಮೀಬಾಯಿಯವರ ಮಾತುಗಳು ಬೇಂದ್ರೆಯವರ ಮುಂದೆ ಮೌನದಲ್ಲೇ ಹುದುಗಿ ಹೋಗುತ್ತಿದ್ದವು. ಇದರಿಂದಾಗಿ ಇವರ ದಾಂಪತ್ಯದಲ್ಲಿ ಒಮ್ಮೊಮ್ಮೆ ವಿರಸವೂ ತುಂಬಿರುವುದಕ್ಕೆ ಕಾರಣವಾಗಿರಬಹುದು.

ಬೇಂದ್ರೆಯವರಿಗೆ ಪ್ರೀತಿ, ಪ್ರೇಮ, ಪ್ರಣಯ ಮೊದಲಾದ ಶಬ್ದಗಳಿಗಿಂತ 'ಒಲವು' ಎಂಬ ಶಬ್ದ ಹೆಚ್ಚು ಪ್ರಿಯವಾದಂತಿದೆ. ಒಲ್ಮೆ, ಒಲವು, ಒಲೆ ಶಬ್ದಗಳ ಚಿಂತನವನ್ನು ಅವರು ಆಳವಾಗಿ ಮಾಡಿದ್ದಾರೆ. ಪ್ರೀತಿ, ಪ್ರೇಮ, ಪ್ರಣಯ ಬಹಿರಂಗ ಕ್ರಿಯೆಯಾದರೆ, ಒಲವು ಒಂದೇ ಅಂತರಂಗದ ಸ್ಥಾಯಿಭಾವ. ಹೀಗೆ ತನ್ನ ಪತ್ನಿಯನ್ನು ಸಖಿಯಾಗಿ ಕಾಣುವುದು ಈ ಸಖೀಗೀತದಲ್ಲಿ ಕಾಣಬಹುದಾಗಿದೆ.

ಬೇಂದ್ರೆಯವರು 'ನರಬಲಿ' ಕವನವನ್ನು ಬರೆದಿದ್ದರ ಪರಿಣಾಮವಾಗಿ ಸೆರೆಮನೆವಾಸ ಅನುಭವಿಸಿದರು. ಇದರ ಪರಿಣಾಮವಾಗಿ ಕವಿ-ನಾಯಕನ ದಾಂಪತ್ಯ ಜೀವನದ ಮೇಲೆ ಕರಿನೆರಳು ಬೀಳುತ್ತದೆ. ಪತಿ-ಪತ್ನಿಯರ ನಡುವಿನ ವಿರಸ ಉಲ್ಬಣಗೊಂಡು ಒಬ್ಬರನೊಬ್ಬರು

ಮುಖಭಂಗಿಸಿ ಕೆಣಕಾಡಿ ಅಣಕಿಸಿ ಕಾದಾಡುತ್ತಾರೆ. ಈ ಗಂಡಹೆಂಡಿರ ಜಗಳದಲ್ಲಿ ಕೂಸುಗಳು ಬಡವಾಗುತ್ತವೆ.

'ಕುದಿ ಎಸರು ಬರದಿರ, ಚಳಿ ಬಿಸಿಲು ಉಣದಿರೆ
ಪರಿಪಾಕವೆಂಬುದು ಎಂತಹುದು'

ಎನ್ನುವನು ನಾಯಕ. ಇದುವರೆಗೆ ಧ್ವನಿಯೇ ಇಲ್ಲದಂತಿದ್ದ ನಾಯಕಿಯ ಸಹನೆಯ ಮಿತಿ ಹಾರಿ ಈ ರೀತಿ ಪ್ರತಿಕ್ರಿಯಿಸುತ್ತಾಳೆ. 'ನಿಮ್ಮಂತೆ ನನಗಿಲ್ಲ ಆ ತ್ರಾಣವು' ಎನ್ನುವ ಆಕೆ ನೆಲೆಕಾಣದೆ ಬದುಕಿಗೆ ಹೀಗೆ ಹೇಳುತ್ತಾಳೆ.

"ಸಂಸಾರಯಾತ್ರೆಯು ಸಾಗರದೊಡನಾಟ
ಲವಣೋದಧಿಯಲ್ಲಿ ಜಲ-ಪಯಣ
ಎಲಿಗೈತಂದರು ಬರದೊಂದು ಬಂದರು
ಪೃಥ್ವಿ ಪ್ರದಕ್ಷಿಣೆಯೇ ನಿತ್ಯಕ್ರಮ" (ಪುಟ. ೩೨)

ಹೀಗೆ ಕಷ್ಟಗಳಿಂದ ತತ್ತರಿಸಿದರೂ ದಾಂಪತ್ಯದ ಸಮತೋಲನವನ್ನು ಎಚ್ಚರಿಕೆಯಿಂದ ಕಾಯ್ದುಕೊಳ್ಳುವ ವಿವೇಕವನ್ನು ಇಬ್ಬರೂ ತೋರುತ್ತಾರೆ. ಬದುಕಿನಲ್ಲಿ ಬಂದದ್ದೆಲ್ಲವನ್ನೂ ಸ್ವೀಕರಿಸಿ ಮುನ್ನಡೆಯುವ ಆಶಾಭಾವನೆಯನ್ನು ತಾಳುತ್ತಾರಾದರೂ 'ಗೆಳೆಯರ ಬಳಗ'ದ ವಿಘಟನೆ, ಲಲಿತಾ ಎಂಬ ಮಗಳನ್ನು ಕಳೆದುಕೊಂಡ ವ್ಯಥೆ ಅವರನ್ನು ಅಸಹಾಯಕರನ್ನಾಗಿಸುತ್ತದೆ. ಇದು ತನ್ನ ಪರೀಕ್ಷೆಯ ಕಾಲ ಎಂದು ನಾಯಕ ತಿಳಿಯುತ್ತಾನೆ. ಮಗುವನ್ನು ಕಳೆದುಕೊಂಡು ಮೌನದ ಮೊರೆ ಹೋದ ಸಖಿಯನ್ನು ಕಂಡು ನಾಯಕ ಒಮ್ಮೆಲೇ ಬೆಚ್ಚಿ ಅವಳ ತೀಕ್ಷ್ಣ ನೊಂದ ಕಣ್ಣುಗಳನ್ನು ಎದುರಿಸದೇ ಈ ರೀತಿ ಹೇಳುತ್ತಾನೆ.

'ಆ ಕಣ್ಣು ಎಂದರೆ, ಈ ಕಣ್ಣ ತಾಗಿದರೆ
ಗೊಂಬಿ ಮೂಡದ ಕುರುಡ ಗಾಜಾಗಿರೆ' (ಪುಟ.೩೫)

ಅವರು ಇದೇ ಸಂದರ್ಭವನ್ನು ನೆನೆದು 'ನೀ ಹೀಂಗ ನೋಡಬ್ಯಾಡ ನನ್ನ! ನೀ ಹೀಂಗ ನೋಡಿದರ ನನ್ನ ತಿರುಗಿ ನಾ ಹ್ಯಾಂಗ ನೋಡಲೇ ನಿನ್ನ! (ನಾದಲೀಲೆ ಪು. ೯೧)

ಎಂದು ಬಹು ದೈನ್ಯದಿಂದ ನಿಸ್ಸಾಹಯಕರಾಗಿ, ತನ್ನ ಸಖಿಯನ್ನು ಕೇಳಿರುವುದು ಅವರು ವಿರಸದ ಸವಿಯನ್ನು ಸವಿಯುತ್ತ ತೆರೆದ ಮನಸ್ಸಿನಿಂದ ತನ್ನ ತಪ್ಪನ್ನು ಹೇಳಿಕೊಳ್ಳುತ್ತ ಹೃದಯದ ಮಾತಾಗಿಸಿರುವುದು ಅಚ್ಚರಿಯನ್ನುಂಟು ಮಾಡುತ್ತದೆ.

ಅನಂತರ ನಾಯಕ-ನಾಯಕಿಯರಲ್ಲಿ ದೀರ್ಘ ಸಂವಾದ ನಡೆಯುತ್ತದೆ ಸಖಿಗೆ ಜೀವನದ ರಣರಂಗ ಸಾಕಾಗಿದೆ. ಸೋತು ಹೋಗಿದ್ದಾಳೆ.

'ನಿಮ್ಮ ಜೀವನ ರೀತಿ ಬೇಸಿಗೆಯ ಬಿರುಗಾಳಿ
ಅದರ ಸೆರಗಿಗೆ ನಾನು ಬರಿಗಾಳಿಯು!
ಎಂದರೆ, ನಾಯಕ, 'ಅಹಹಾ! ಜೀವದ ಗೆಳತಿ, ಜೀವನದ ಜೊತೆಗಾರ್ತಿ
ನೀನಿಲ್ಲದಾನಿಲಲು ನೆಲವಿದೆಯೇ?' (ಪು. ೩೬)

ಎಂದು ಹೇಳಿ ಅವಳಲ್ಲಿ ಉತ್ಸಾಹ, ಭರವಸೆ ಹುಟ್ಟಿಸಲು ಯತ್ನಿಸುತ್ತಾನೆ. ನಾಯಕ ಪ್ರೀತಿಯ ಗಂಭೀರ ವ್ಯಾಖ್ಯಾನಕ್ಕಿಳಿದಾಗ ನಾಯಕಿ ಅವನ ಆದರ್ಶವಾದವನ್ನು ತಿರಸ್ಕರಿಸಿ ವಾಸ್ತವಕ್ಕೆ ಅಂಟಿಕೊಳ್ಳುತ್ತಾಳೆ. ಬೇಂದ್ರೆಯವರಿಗೆ ದಾಂಪತ್ಯ ಎಂಬುದು ಒಂದು ಸಾಧನೆಯಾಗಿತ್ತು. ಆ ಸಾಧನೆ ವಿರಸದ ಜೀವನವನ್ನು ಮತ್ತೆ ರಸಮಯವಾಗಿಸುವ ಪ್ರಯತ್ನದ ಮನಸ್ಥಿತಿ. ಹಾಗಾಗಿ ತೆರೆದ ಮನಸ್ಸಿನಿಂದ ಸಖಿಯನ್ನು ಮಾತಾಡಿಸಿ, ತನ್ನ ತಪ್ಪನ್ನು ತಿದ್ದಿಕೊಳ್ಳುತ್ತಾ ಸಾಗಿದ ಸಖನನ್ನು ಇಲ್ಲಿ ಕಾಣುತ್ತೇವೆ. ಆದ ಕಾರಣ, ಅವರ ಸಂಭಾಷಣೆಯಲ್ಲಿ ತೆರೆದ ಮನಸ್ಸಿನ, ಪರಸ್ಪರರು ತಿಳಿದು ಬಾಳಲು ಬೇಕಾದ ಮುಕ್ತ ಮಾತಿದೆ. ಅದು ಈ ರೀರಿ ಕಾವ್ಯದಲ್ಲಿ ಮೂಡಿರುವುದು ತಿಳಿಯುತ್ತದೆ. ಅದಕ್ಕೆ ಸಖಿ ನುಡಿಯುತ್ತಾಳೆ.

"ನಿಮಗೇನು ರಮ್ಯತೆ ರಸಿಕ ಕರೆಯುವ
ನೂರು ಹಾದಿಯಲೊಂದು ಅದು ಹಾದಿಯ
ನಮಗೆ ಜೀವನದಾಟ-ಪಾಟದ ನೋಟದ
ಬೇಟದ ಕೂಟದ ಸುಸಮಾಧಿಯು" (ಪುಟ. ೩೬)

ಅದಕ್ಕೆ ಉತ್ತರವೆಂಬಂತೆ ಕವಿ ನುಡಿಯುತ್ತಾನೆ;

'ಜೀವನಿಗಾಧಾರ, ಜೀವನಾಮೃತಧಾರೆ
ಪ್ರೀತಿ ಜೀವದೊಳಾರೆ ಜೀವನವೇ?' (ಪುಟ. ೩೭)

ಹೀಗೆ ಸತಿ-ಪತಿ ದಾಂಪತ್ಯ ಜೀವನದಲ್ಲಿ ಎಣ್ಣೆ ಮತ್ತು ಬತ್ತಿಯ ಸಂಬಂಧಿಸಿದಂತೆ ಪ್ರೇಮ ರಾರಾಜಿಸಬೇಕು ಎನ್ನುತ್ತಾರೆ.

ಸಖಿ ಏನೇ ವಾದ ಮಾಡಿದರೂ ಸಖನ ಈ ಪ್ರೇಮಾಲಾಪನೆಯನ್ನು ಕಂಡು ಒಳಗೊಳಗೆ ನೊಂದುಕೊಳ್ಳುತ್ತಾಳೆ.

"ನಿಮ್ಮ ಜೀವನ ಧ್ಯೇಯ ಗೌರಿಶಂಕರದಂತೆ
ಶಿಖರವನ್ನೆತ್ತಿದೆ ಮುಗಿಲಿನೆಡೆ
ನನ್ನೆದೆ ತಿರುಗಿದೆ ಗಂಗೆಯು ಹರಿದಂತೆ
ಜನರೀತಿಯಂತೆಯೆ ನೆಲದ ಕಡೆ" (ಪುಟ. ೩೮)

ಈ ರೀತಿ ಪತ್ನಿ ನುಡಿಯುವಾಗ ಕವಿಗೂ ಮತ್ತು ಕವಿಪತ್ನಿಗೂ ಇರುವ ವೈಚಾರಿಕ ಭಿನ್ನತೆ ಅರಿವಾಗುತ್ತದೆ. ಅವಳು ಕವಿಯ ಆದರ್ಶ, ಧ್ಯೇಯಗಳ ಬಗ್ಗೆ ಹೇಳುತ್ತಲೇ ತಾನು ಜನರೀತಿಯಂತೆ ಈ ನೆಲದ ಬದುಕಿನ ಕಡೆಗೆ ಒಲಿದವವಳು ಎಂದು ಹೇಳುತ್ತಾಳೆ. ಇದರಿಂದ ಆತನ ಆದರ್ಶದ ಕಲ್ಪನೆಯನ್ನು ಹಾಗೂ ಆ ನೆಲಕ್ಕಂಟಿದ ಅವನ ಜೀವನದಲ್ಲಿ ಪಡುತ್ತಿರುವ ಸಂತೋಷವನ್ನು, ಆಕೆ ಕಂಡಿರುವುದಾಗಿ ತಿಳಿಸುತ್ತಾಳೆ. ಇದು ಒಬ್ಬ ಸಾಮಾನ್ಯ ಗೃಹಿಣಿ ತನ್ನ ಪತ್ನಿಯನ್ನು ಹಾಗೂ ಅವನ ಆಂತರ್ಯವನ್ನು ಅರಿತಿರುವುದು ತಿಳಿಯುತ್ತದೆ.

'ಗೆಳೆಯರ ಕೂಡಾಡಿ ಬಂದಾಗ, ನಾ ನಿಮ್ಮ
ಮುಖದಲುಕ್ಕುವ ಗೆಲುವ ಕಂಡಿಲ್ಲವೆ!'

ಈ ಮಾತುಗಳೆಲ್ಲವೂ ಕವಿಯನ್ನು ಎಚ್ಚರಗೊಳಿಸುತ್ತವೆ. ಆತನು ತನ್ನ ತಪ್ಪನ್ನು ಅರಿತು ಆತ್ಮಶೋಧನೆಗೊಳಗಾಗುತ್ತಾನೆ. ಚಿಕ್ಕಂದಿನಲ್ಲಿ ತನ್ನ ತಾಯಿ ತಮ್ಮನ್ನು ಸಾಕಿದಂತೆ, ಕವಿಪತ್ನಿ ತನ್ನ ಮಕ್ಕಳನ್ನು ಕಷ್ಟ ಪಟ್ಟು ಸಲುಹುತ್ತಿರುವುದನ್ನು ನೋಡಿ ಅವನ ಪ್ರಜ್ಞೆ ಎಚ್ಚರವಾಗುತ್ತದೆ. ಅದಕ್ಕೆ ಕವಿ ಈ ರೀತಿ ನುಡಿಯುತ್ತಾನೆ.

'ನನ್ನ ತಾಯಿಯ ನೆನೆದು ನಾ ಸುಮ್ಮನಾದೆನು
ಒಳಗೊಂದು ಹೊರಗೊಂದು ಜೀವಿಸಿದೆ'

ಎಂದು ತನ್ನ ಒಳಮನವನ್ನು ಎಚ್ಚರಿಸಿ ನಿರಾಳ ಮನದವನಾಗುತ್ತಾನೆ. ಕವಿಯಲ್ಲಿ ಈ ಭಾವ ಮೂಡಿದಂದು ಅವನಲ್ಲಿ ಸಮಾನ ಸಮರಸ ತತ್ತ್ವಮೂಡಿದಂತೆ. ನಂತರ ಈ ಸಖ–ಸಖಿ ಬಾಂಧವ್ಯ ಗಟ್ಟಿಯಾಗುತ್ತದೆ.

"ಅನ್ನಕೆ ಬಾಳಾಗಿ ಕಾಮಕೆ ಹೋಳಾಗಿ
ಮಾನಕೆ ಆಳಾಗಿ ಉಸಿರೆಳೆದುದು
ಬಾಳಲ್ಲ ಬದುಕಲ್ಲ; ಜೀವ ಜೀವಕೆ ಉ–
ದ್ದೀಪನವಾದುದೆ ಜೀವನವು" (ಪುಟ. ೪೨)

ಹೀಗೆ ಒಂದು ಜೀವ ಮತ್ತೊಂದು ಜೀವಕ್ಕೆ ಉದ್ದೀಪನವಾಗಿರಬೇಕು. ಸಖೀಗೀತದಲ್ಲಿ ಪತಿಪತ್ನಿಯರು ಜೀವನದ ಸಂಕಟಗಳ ಬೆಂಕಿಯಲ್ಲಿ ಬೆಂದು ಸಖ–ಸಖಿಯರಾಗುವ ಪ್ರೀತಿ ಅತ್ಯಂತ ಹೃದಯಂಗಮವಾಗಿ ಮೂಡಿ ಬಂದಿದೆ. ಕಾಮವನ್ನು ಬಿಟ್ಟು ಬದುಕಿನಿಂದ ಪ್ರತ್ಯೇಕಿಸಿ ನೋಡುವುದಕ್ಕಿಂತ ಜೀವನದ ಬೆಂಕಿಯಲ್ಲಿ ಅದು ಪಡೆದುಕೊಳ್ಳುವ ಸ್ವರೂಪವನ್ನು ಶೋಧಿಸುವುದರಲ್ಲಿ ಬೇಂದ್ರೆಯವರಿಗೆ ಅತಿ ಆಸಕ್ತಿ. ಗಂಡು–ಹೆಣ್ಣುಗಳ ನಡುವೆ, ಬದುಕಿನ ಗ್ರಹಿಕೆಯಲ್ಲೇ ಮೌಲ್ಯಾತ್ಮಕ ವ್ಯತ್ಯಾಸಗಳು ತಲೆದೋರಿದಾಗ ಅದರ ಕರಿನೆರಳು ದಾಂಪತ್ಯ ಜೀವನದ ಮೇಲೂ ಬಿದ್ದು, ಒಂದು ಬಗೆಯ ಸಂಘರ್ಷ ಕಾಡಬಹುದು. ಆದ ಕಾರಣ,

ಕುಟುಂಬವೊಂದು ಅರ್ಥಪೂರ್ಣವಾಗಿ ಬಾಳಬೇಕಾದರೆ, ಅದರ ಪ್ರಮುಖ ಪಾತ್ರಗಳಾದ ದಂಪತಿಗಳು ಅರಿತು ಬಾಳುವುದು ಮುಖ್ಯವಾಗಿರುತ್ತದೆ.

"ಏಕಾಂತದ ಜಿನುಗು ಲೋಕಾಂತ ಕಳೆಯಿತು
ಜನವು ಜನಾರ್ಧನನೆಂದರಿತೇ" (ಪುಟ. ೪೩)

ಈ ಕಾವ್ಯದ ಕೊನೆಯ ವೇಳೆಗೆ ಕವಿ ಪುರಷ ಪ್ರಧಾನ ಜಂಭದಿಂದ ಸಡಿಲಗೊಂಡಿರುವಂತೆ ತೋರುತ್ತದೆ. ಜೊತೆಗೆ ಅವನಲ್ಲಿ ದಾಂಪತ್ಯದ ಸಂತೋಷಕ್ಕೆ ಸಖ-ಸಖಿಯರಲ್ಲಿ ಹೊಂದಾಣಿಕೆ ಸರಿಸಮನಾಗಿರಬೇಕೆಂಬ ತಿಳಿವು ಬಂದಿದೆ. ಅದನ್ನು ಕವಿ ಮುಕ್ತವಾಗಿ ಹೇಳಿಕೊಂಡಿರುವುದು ಈ ಕಾವ್ಯದ ಆ ಕಾಲಮಾನದ ಹೆಮ್ಮೆಯ ವಿಷಯವಾಗಿ ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಮಾನತೆಯನ್ನು ಸಾರಿದ ಆದ್ಯ ಕಾವ್ಯವಾಗಲು ಕಾರಣವಾಗಿದೆ.

"ಅಂಬಿಕಾತಯನ ಜಂಭದ ಪಾಡಳಿದು
ನಂಬಿಕೆಯ ಹಾಡಾಗಿ ಬಂತಿಲ್ಲಿಗೆ
ಪೂರ್ವಾನುರಾಗವೀ ಪರ್ವಕೆ ಸಂದಿತು
ಉತ್ತರೋತ್ತವಿರಲಿ ಉತ್ತರಕೆ!" (ಪುಟ. ೪೪)

ಎಂದು ಕವಿಯು ಕೊನಯ ಭಾಗದಲ್ಲಿ ತಿಳಿಸುತ್ತಾ, ಸಖ-ಸಖಿಯರ ಬದುಕು ಎಂದರೆ, ಅದು ಒಂದು ಕುಣಿತವಿದ್ದಂತೆ. ಆದ ಕಾರಣ ಸಖೀಗೀತದ ಹಾಡಿಗೆ 'ಅಕ್ಕರ ಛಂದವು ಸಾಂಗತ್ಯ ಸಂಸ್ಕಾರ'ವಿದೆ ಹಾಗೂ 'ಕುಣಿತದ ಹಾಡಿದು ಕುಣಿಯ ಹಚ್ಚಿತು ಜನಕೆ ಕಲ್ಲಾದ ಮನಗಳ ಕರಗಿಸಿತು.' ಈ ಬಗೆಯ ಆಹ್ಲಾದವನ್ನು ತಂದ ಈ ಕಾವ್ಯದ ಗುರಿಯನ್ನು ಕವಿ ಸ್ಪಷ್ಟಗೊಳಿಸಿದ್ದಾರೆ. 'ಕಲ್ಯಾಣ ಶಕ್ತಿಯ ಕೈಯ ಕುಶಲತೆಯಿಂದ ಪಾಕವಾಗಲಿ ಪ್ರೇಮ!' ಜೊತೆಯಲ್ಲಿಯೇ ಇದು ಸಖ-ಸಖಿಯರ ಹಾಡು. ಅದು ನಿರಂತರವಾಗಿ ಸಾಗುತ್ತಿರುತ್ತದೆ. ಅದಕ್ಕೆ ಕೊನೆಯೇ ಇಲ್ಲವೆಂಬುವುದಕ್ಕೆ-,

'ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!'

ಎಂಬ ಸಾಲುಗಳು ಈ ಗೀತದ ಸುತ್ತು ಸುತ್ತಿನಲ್ಲಿ ಸುಳಿದು ಬಂದು ಗೀತದ ರಮ್ಯತೆಯನ್ನು ಹೆಚ್ಚಿಸಿದೆಯಲ್ಲದೆ ಪುನಃ ಸೃಷ್ಟಿಯ ಸಂಕೇತವಾಗಿಯೂ ಕಾಣಿಸಿಕೊಳ್ಳುತ್ತದೆ.

ಸಖೀಗೀತದಲ್ಲಿನ ಕವನದ ವಸ್ತುವನ್ನು ಗಮನಿಸಿದರೆ ಇಲ್ಲಿ ಸಖಿ ಚಿತ್ರಗಳೇ ವಿರಳ. ನಾಯಕನಿಗೆ ಸಂಬಂಧಿಸಿದ ಬೇರೆ ಬೇರೆ ಘಟನೆಗಳ ಪ್ರಸ್ತಾಪವಿದೆಯೇ ಹೊರತು ಸಖಿಯ ಜೊತೆ ಸಡಗರದಿಂದ ಬಾಳು ನಡೆಸುವುದದನ್ನು ಸಖನ ಧ್ವನಿಯಲ್ಲಿ ಮಾತ್ರ ಕೇಳುತ್ತೇವೆ.

ಸಖಿಯ ಸ್ನೇಹಿತರು, ನೆಂಟರು, ತವರು ಮನೆಯವರು ಇಲ್ಲಿ ಯಾರೂ ಸುಳಿಯುವುದಿಲ್ಲ. ನಾಯಕಿಯ ಪ್ರತ್ಯೇಕ ಅಸ್ತಿತ್ವವನ್ನು ಕವನದಲ್ಲಿ ತರುವುದಿಲ್ಲ, ಗುರುತಿಸುವುದಿಲ್ಲ. ಬದಲಾಗಿ ತನ್ನ ಅಸ್ತಿತ್ವದ ಮುಂದುವರಿಕೆಯ ಭಾಗವಾಗಿ ತನ್ನ ಬಾಳಿಗೆ ಸಂಬಂಧಿಸಿದ ಮಟ್ಟಿಗೆ ಮಾತ್ರ ಗುರುತಿಸುತ್ತಾನೆ.

"ಸಖ-ಸಖಿ ಪ್ರತ್ಯೇಕ ವ್ಯಕ್ತಿಗಳು. ಅವರು ಕೂಡಿ ದಂಪತಿಗಳಾದ ಒಂದೇ ಘಟಕವಾದರೂ ಅವರವರ ಚಿಂತನೆ, ಆಲೋಚನೆ ಪ್ರತ್ಯೇಕವಾಗಿ ಉಳಿಯುತ್ತದೆ. ಹಾಗೆ ಉಳಿಯಬೇಕು. ಹಾಗೆ ಉಳಿದೂ ಅವರು ಒಂದಾಗಿ ಚಿಂತಿಸಿ, ಬಾಳನ್ನು ನಡೆಸುವುದರಿಂದ ಬದುಕು ಅರ್ಥಪೂರ್ಣವಾಗುತ್ತದೆ. ಅಂತಹ ಕುಟುಂಬದ ಬಾಳು ಸಮಾಜದ ಸ್ವಾಸ್ಥ್ಯಕ್ಕೆ ಅತಿ ಅವಶ್ಯಕ. ಅಂತಹ ಕುಟುಂಬಗಳಿಂದ ದೇಶ ಕಲ್ಯಾಣವಾಗುತ್ತದೆ ಎಂಬ ಚಿಂತನೆ ಈ ಕಾವ್ಯದಲ್ಲಿದೆ.

ಪ್ರೀತಿ ಇಲ್ಲಿ ಪ್ರೇಮವಾಗಿ ವಿಕಾಸ ಹೊಂದುವಾಗ ಉಂಟಾದ ಎಡರು-ತೊಡರುಗಳು ಆ ತೊಡಕನ್ನು ಬಿಡಿಸಿಕೊಂಡು ಬೆಳೆದು ಫಲಬಿಟ್ಟ ಬಗೆಯ ಚಿಂತನ ಲಹರಿ ಇಲ್ಲಿದೆ. ವೈವಾಹಿಕ ಬಂಧನದ ಮಿತಿಯಲ್ಲಿ ಪ್ರೀತಿಯ ಪಲ್ಲವದೊಂದಿಗೆ ಶುದ್ಧ ಲೈಂಗಿಕ ಜೀವನ, ಸಂತಾನಾಭಿವೃದ್ಧಿ, ಶಾಂತಿ, ನೆಮ್ಮದಿಗಾಗಿ ಸಖ-ಸಖಿಯರು ಪ್ರಯತ್ನಿಸುತ್ತ ಆ ಮೂಲಕ ಸಮಾಜಮುಖಿ ಚಿಂತನೆಯನ್ನು ಹೊಂದಿ ಸುಸಂಸ್ಕೃತ ನಾಗರಿಕರಾಗಬೇಕೆಂದು ಈ ಕಾವ್ಯ ಆಶಿಸುತ್ತದೆ.

ಸಖೀಗೀತವು ಆತ್ಮಕತೆಯನ್ನು ಕಾವ್ಯಕಲೆಯಾಗಿ ಹೆಣೆದಿರುವ ಅಪೂರ್ವ ಕಾವ್ಯವಾಗಿದೆ. ಇಲ್ಲಿ ಆತ್ಮಕತೆ ಮತ್ತು ಕಲೆ ಸಖ-ಸಖಿಯರಂತೆ ಒಂದುಗೂಡಿದೆ. ಹಾಗೆ ಒಂದುಗೂಡಿದ ಕಾವ್ಯದ ಆತ್ಮ 'ಸಖೀಗೀತ'ವಾಗಿದೆ."[೮]

'ಸಖೀಗೀತ'ದ ಇಡೀ ಅಭಿಪ್ರಾಯವನ್ನು ಎಲ್. ಎಸ್. ಶೇಷಗಿರಿರಾವ್ ಅವರು ತಮ್ಮ ಲೇಖನವೊಂದರಲ್ಲಿ ಹೀಗೆ ಹೇಳುತ್ತಾರೆ. "ನಾಯಕ-ಸಖಿಯರಿಬ್ಬರೂ ತಮ್ಮ ಬಿಚ್ಚುಸ್ಮೃತಿಗಳ ಹಾಯಿಯನ್ನು ಕವನದಲ್ಲಿ ಬೀಸುವರೆಂದು ನಾಯಕ ಹೇಳಿದರೂ ಇದು ಆತ್ಮವೃತ್ತವಾದದ್ದರಿಂದ ಸಖಿಯ ಮನಸ್ಸಿನಲ್ಲಿದ್ದುದ್ದೆಲ್ಲವನ್ನು ನಾಯಕ ಹೇಳಲಾರ. ಅವಳು ಬಾಯಿಬಿಟ್ಟು ಹೇಳಿದುದನ್ನು ಪುನರುಚ್ಚರಿಸಬಲ್ಲ ಅವಳ ಚರ್ಚೆಯಿಂದ ಅವಳ ಭಾವವನ್ನು ತಾನು ಅರ್ಥಮಾಡಿಕೊಂಡಷ್ಟರ ಮಟ್ಟಿಗೆ ಹೇಳಬಲ್ಲ. ಕವನದಲ್ಲಿ ಸಖಿಯ ಮಾತುಗಳಷ್ಟೇ ಅವಳ ಮೌನವೂ ಮುಖ್ಯವಾಗುತ್ತದೆ. ಅವಳು ಮಾತನಾಡುವುದು ತೀರ ಸಹಜವಾಗಿದ್ದಾಗ, ಅವಳು ಮಾತನಾಡದೆ ಹೋಗುವುದು ಅಥವಾ ಅವಳ ಭಾವನೆಯನ್ನೇ ನಾಯಕನೇ (ತಾನು ಕಂಡ ಮಟ್ಟಿಗೆ) ವರ್ಣಿಸುವುದು ಮುಖ್ಯವಾಗುತ್ತದೆ..."[೯]

ಬೇಂದ್ರೆಯವರ 'ಸಖೀಗೀತ' ಕಾವ್ಯಮಾಲೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ 'ಸಖ-ಸಖಿ' ಸಮಸುಖಿ ಸಾಧನೆಯನ್ನು ಪತ್ನಿಯೊಂದಿಗೆ ನಡೆಸಿರುವುದು ತಿಳಿಯುತ್ತದೆ. ಸುಮಾರು ನಲವತ್ತೇಳು ವರ್ಷ ಜೊತೆಗೂಡಿ ಸಂಸಾರವನ್ನು ಮಾಡಿರುವಾಗ ಪತಿಯ ಜೀವನದಲ್ಲಿ ಅವರ ಪಾತ್ರವೇನು ಎಂಬುದನ್ನು ಯಾರಾದರೂ ಬಣ್ಣಿಸಿರುವುದು ಅವಶ್ಯವೆ? ಎಂದು ವಾಮನ ಬೇಂದ್ರೆಯವರು ಅಭಿಪ್ರಾಯಪಡುತ್ತಾರೆ. 'ಕೂಡಿರಲಿ ಬಾಳು ಇಡಿಗಾಳಿನಂತೆ' ಎಂದು ಎಲ್ಲಾ ಕಷ್ಟ-ಸುಖ, ನೋವು-ನಲಿವು, ಬಡತನ-ಸಿರಿತನದಲ್ಲಿ ತನ್ನ ಪತ್ನಿಯೊಡನೆ ತುಂಬು ಜೀವನ ನಡೆಸಿದ ಕುಟುಂಬ ವತ್ಸಲ ಬೇಂದ್ರೆ, ದಾಂಪತ್ಯದ ಸುಖದಲ್ಲಿ ಮಕ್ಕಳ ನಲಿದಾಟದ ಕಂಪಿನಲ್ಲಿ ಉಸಿರಾಡಿದವರು ಬೇಂದ್ರೆ. ದಾಂಪತ್ಯದಲ್ಲುಂಟಾದ ವಿರಸದ ಸವಿಯನ್ನು ಸವಿಯುತ್ತಲೇ ತೆರೆದ ಮನಸ್ಸಿನಿಂದ ತಮ್ಮ ತಪ್ಪನ್ನು ಹೇಳಿಕೊಳ್ಳುತ್ತ ಸ್ತ್ರೀ ಸಮಾನತೆಯನ್ನು ಪ್ರತಿಪಾದಿಸಿದರು. ತನ್ನ ಪತ್ನಿಯನ್ನು ಸಖಿಯಾಗಿ ಕಂಡು ಜೀವನ ಪಥದಲ್ಲಿ ಹೆಜ್ಜೆ ಹಾಕಿದರು. ಬೇಂದ್ರೆ ಪತ್ನಿಯನ್ನು ಸಖಿಯನ್ನಾಗಿಸಿಕೊಳ್ಳುವ ಈ ಎಲ್ಲಾ ಪ್ರಯತ್ನದ ಹಿಂದೆ ಅವರ ಗಹನವಾದ ತಾತ್ವಿಕ ಸ್ಪಷ್ಟತೆ ಹಾಗೂ ನಿಷ್ಠೆ ಅರ್ಥಪೂರ್ಣವಾಗಿದೆ.

## ಬೇಂದ್ರೆಯವರ ಪ್ರಣಯ ಕವನಗಳು

'ಶೃಂಗಾರ' ಅತ್ಯಂತ ಮೋಹಕವಾದ ರಸ. ಆದುದರಿಂದಲೇ ಕಾವ್ಯಪರಂಪರೆಯಲ್ಲಿ ಬಹುಪಾಲು ಅದಕ್ಕೆ ಮೀಸಲು. ಆದರೆ, ಅದನ್ನು ಔಚಿತ್ಯದ ಗೆರೆ ಮೀರದಂತೆ ನಿರ್ವಹಿಸುವುದು ತುಂಬಾ ಕಷ್ಟ. ಸಂಸ್ಕೃತ ಸಾಹಿತ್ಯದಲ್ಲಿ ಶೃಂಗಾರವನ್ನು ಕಾವ್ಯವಸ್ತುವನ್ನಾಗಿ ಮಾಡಿಕೊಂಡು ಯಶಸ್ವಿಯಾಗಿ ನಿರ್ವಹಿಸಿದವನು 'ಅಮರುಕ' ಕವಿ. ಇಂಗ್ಲಿಷ್ ಸಾಹಿತ್ಯದಲ್ಲಿಯೂ ಶೃಂಗಾರವನ್ನು ತೂಕ ತಪ್ಪದೆ ನಿರ್ವಹಿಸಿದ ಕವಿತೆಗಳು ಸಾಕಷ್ಟಿವೆ. ಹಾಗೆ ಹಳೆಗನ್ನಡ ಕಾವ್ಯದಲ್ಲಿಯೂ ಶೃಂಗಾರ, ಪ್ರಮುಖ ಸ್ಥಾನವನ್ನು ಆಶ್ರಯಿಸಿಕೊಂಡಿದೆ. ಆದರೆ, ಅಲ್ಲಿಯೂ ಶೃಂಗಾರ ರಸತ್ವಕ್ಕೇರದೆ ಕೇವಲ ಭಾವಮಟ್ಟದಲ್ಲಿ ಮತ್ತು ಅಷ್ಟಾದಶ ವರ್ಣನೆಯ ಒಂದು ಅಂಗವಾದ ಶೃಂಗಾರ ಚಿತ್ರಣದ ನಿಯಮವನ್ನು ಮಾತ್ರ ಪರಿಪಾಲಿಸುತ್ತದೆ. ನಿಜವಾಗಿಯೂ ಜನಪದ ಗೀತೆಗಳಲ್ಲಿ ನಿಸ್ಸಂಕೋಚವಾದ, ಸಹಜವಾದ ಪ್ರಣಯವನ್ನು ಕುರಿತ ಅಭಿವ್ಯಕ್ತಿ ಸಾಕಷ್ಟಿದೆ. ಹೀಗೆ ಜನಪದ ಕಾವ್ಯಸತ್ವದಿಂದ ಮೂಲ ಸ್ಫೂರ್ತಿಯನ್ನು ಪಡೆದು ಬೇಂದ್ರೆಯವರು ಅದೆಷ್ಟೋ ಪ್ರಣಯ ಕವನಗಳನ್ನು ರಚಿಸಿದ್ದಾರೆ. ಅವರ ಪ್ರಣಯ ಕವನಗಳು ಸತ್ವ ಪೂರ್ಣವೂ, ಸಹಜವೂ ಆಗಿ ನಮ್ಮ ಮನಸ್ಸಿನಲ್ಲಿ ನೆಲೆಯೂರುತ್ತವೆ. ಬೇಂದ್ರೆಯವರ ಪ್ರಣಯಗೀತೆಗಳು ಅನಂತವಾಗಿವೆ. ಅವಗಳನ್ನೇ ಒಂದು ಕವನ ಸಂಕಲನವಾಗಿ ಮಾರ್ಪಡಿಸುವಷ್ಟು ಅಗಾಧವಾಗಿವೆ. ವಿಶೇಷವೇನೆಂದರೆ, ಅವು ಸಂಖ್ಯೆಯಲ್ಲಿ ಮಾತ್ರ ಅಗಾಧವಾದುದಲ್ಲ. ವೈವಿಧ್ಯತೆಯಲ್ಲೂ ಅಗಾಧವಾದುವು.

ಬೇಂದ್ರೆಯವರು ಒಲವಿನ ಆರಾಧಕರಾಗಿದ್ದರು. ಪ್ರೀತಿ, ಪ್ರೇಮ, ಪ್ರಣಯ ಎಂಬ ಶಬ್ದಗಳಿಗಿಂತ ಒಲವು, ಒಲ್ಮೆ, ಎಂಬ ಶಬ್ದ ಚಿಂತನಗಳು ಆಳವಾಗಿ ಬೇರೂರಿದ್ದವು. ಪ್ರೀತಿ ಎಂಬುದು ಗಂಡು-ಹೆಣ್ಣಿನ ಯೌವನ ಸಹಜವಾದ ಬಯಕೆ. ಅದು ಪ್ರೇಮವಾಗುವುದು ಪ್ರಿಯಕರ-ಪ್ರೇಯಸಿಯು ಪ್ರೀತಿಯ ಸ್ವಾರ್ಥವನ್ನು ಮೀರಿ ಪ್ರೇಮಾರಾಧಕರಾದಾಗ ಅಂತಹ ಪ್ರೇಮದಲ್ಲಿರುವ ಕಾಮಕ್ಕೆ ಶುದ್ಧತೆ ಆವರಿಸುತ್ತದೆ. ಇಂತಹ ಶುದ್ಧವಾದ ಒಲವಿನ ಕವನಗಳು ಬೇಂದ್ರೆಯವರವು.

'ಪ್ರಣಯವೆಂದೆ, ಓ ಪ್ರಣವ ಎಂದೆ ಯವ ಮಾತ್ರ
ಭೇದವಿಲ್ಲಾ' – ಅಂಬಿಕಾತನಯದತ್ತ
ನಾನು ಒಲವು-ಲಿಂಗದ ಉದ್ಭವವಾದಿ, ಅದು ನನ್ನ ಹಾದಿ;
ಅದಕ್ಕೆ ತಕ್ಕ ಪದ, ಅರ್ಥ, ಲಯ, ಧ್ವನಿ, ಪ್ರಕೃತಿ ಪೌರುಷ ನನ್ನದು'

– ದ. ರಾ. ಬೇಂದ್ರೆ.

ಪ್ರೇಮ ಎಂಬುದು ಅತ್ಯಂತ ಸಂಕೀರ್ಣವಾದ ಒಂದು ಸ್ವಭಾವ. ಇಲ್ಲಿ ಕೇವಲ ಪ್ರೇಮದ ಆದರ್ಶೀಕರಣ ಅಥವಾ ಕಾಮದ ನಿರಾಕರಣೆಯ ಸರಳೀಕರಣದ ಮಾತಿಲ್ಲ. ವಿವಾಹ ಪೂರ್ವ, ವೈವಾಹಿಕ ಮತ್ತು ವಿವಾಹ ಬಾಹಿರವಾದ ಪ್ರೇಮ ಪ್ರಣಯದ ವಿವಿಧ ರೂಪಗಳ ನೈಜ ನಿರೂಪಣೆ ಬೇಂದ್ರೆಯವರ ಭಾವಗೀತೆಗಳಲ್ಲಿದೆ. ಇದೇ ಬೇಂದ್ರೆಯವರ ಕಾವ್ಯದ ವೈಶಿಷ್ಟ್ಯ. ಪ್ರೇಮದಲ್ಲಿ ಆಕಾಂಕ್ಷೆ ಮೊದಲ ಹೆಜ್ಜೆ. ಬಯಕೆ ಅದರ ಬೆಳವಣಿಗೆ. ಇದು ಕೇವಲ ಕ್ಷಣಿಕವಾಗದೆ ನಿರಂತರವಾಗಿರಬೇಕು. ಯೌವ್ವನದ ಗಂಡು-ಹೆಣ್ಣುಗಳಲ್ಲಿ ಆಕರ್ಷಣೆ ಸಹಜ. ಇದು ಪ್ರೇಮದ ಮೊದಲ ಹಂತ. ಆ ಆಕರ್ಷಣೆಯಲ್ಲಿ ಅವರು ಪರಸ್ಪರರನ್ನು ನೋಡಬೇಕು, ಮಾತಾಡಬೇಕು, ಕೂಡಬೇಕು ಎಂದು ಬಯಸುತ್ತಾರೆ. ಬೇಂದ್ರೆಯವರು ಆ ಭಾವನೆಗಳನ್ನು 'ವಾರಿನೋಟ', 'ಬಡವರ ಮಗಳು', 'ಗಿಣಿ ಹೇಳ', 'ಪೋರ-ಪೋರಿ', 'ಚಿತ್ತ', 'ಅವನು-ಅವಳು', 'ರಾಗರತಿ' ಮುಂತಾದ ಕವನಗಳಲ್ಲಿ ಹಿಡಿದಿಟ್ಟಿದ್ದಾರೆ.

"ಬೇಂದ್ರೆಯವರು ಈ ಪ್ರಕೃತಿ ಸಹಜ ಆಕರ್ಷಣೆಯನ್ನು 'ವಾರಿನೋಟ' ಕವನದಲ್ಲಿ ವಿಜೃಂಭಿಸಿರುವ ರೀತಿ ಅನನ್ಯವಾಗಿದೆ. ಯೌವನದ ಹೆಣ್ಣು ತನ್ನೆಲ್ಲ ಬೆಡಗು ಬಿನ್ನಾಣದಿಂದ ಹೋಗುವಾಗ ನೆಲದ ಮೇಲೆ ನಡೆದಂತಿರುವುದಿಲ್ಲ. ಅದೂ ಹೊಳೆಯ ದಂಡೆಯ ಮೇಲೆ ನಡೆವಾಗ ಹಾರಿದಂತಿರುತ್ತದೆ. ಅವಳಿಗೆ ಗಂಡಿನ ಬಗ್ಗೆ ಸಹಜ ಆಕರ್ಷಣೆ ಇದ್ದು, ಅದು ಅವಳ 'ವಾರಿನೋಟ'ವಾಗಿರುತ್ತದೆ. ಹೆಣ್ಣಿನಿಂದ ಸೆಳೆಯಲ್ಪಟ್ಟ ಗಂಡು ಏನೇ ಎಡರು-ತೊಡರಿದ್ದರೂ ಅದನ್ನು ಈಸಿ ಜೈಸಿ ಪಡೆಯುವೆವೆಂಬ ಸಾಹಸ ಮನದವನಾಗಿರುತ್ತಾನೆ. ಈ ಈರ್ವರ ಮಧ್ಯೆ ಹೊಳೆಯಿದೆ. ಅದು ಪ್ರಕೃತಿ ಸಹಜ ಸೃಷ್ಟಿಯಾದ ಚಲಶೀಲತೆಯ

ಪ್ರತೀಕವಾಗಿದೆ. ಅದು ಒಬ್ಬರನ್ನೊಬ್ಬರನ್ನು ಸೇರುವ ಬೆರೆಯುವ ಕಾತುರದ ಸಂಕೇತವೂ ಆಗಿದೆ. ಹೀಗೆ ಇಲ್ಲಿ ಹೊಳೆಯ ಮೇಲೆ ಮತ್ತು ಹೊಳೆಯಲ್ಲಿರುವ ಪ್ರೇಮಾಕಾಂಕ್ಷಿ ಹೆಣ್ಣು-ಗಂಡಿನ ಯೌವನದ ಸೆಳೆತ ಮತ್ತು ಮಿಡಿತವು ಇಲ್ಲಿ ಕಾವ್ಯವಾಗಿದೆ".[೧೦]

'ವಾರಿನೋಟ ಹಾರುತಿತ್ತೋ ಹೊಳಿಮ್ಯಾಗ
ಹೊಸಾ ಹರೆ ಈ ಸತಿತ್ತೊ ಹೊಳಿಯಾಗ'
ಸೂಜಿಗಲ್ಲು ತಿರುಗತಿತ್ತೊ ಹೊಳಿಮ್ಯಾಗ
ಸೂಜಿಯೊಂದು ತೇಲತಿತ್ತೋ ಹೊಳಿಯಾಗ'

ಈ ಕವನದಲ್ಲಿ ತರುಣಿಯ ಬಳ್ಳಿಯಂತಹ ದೇಹ, ಅದನ್ನು ತಬ್ಬಿ ಸುಳಿದಾಡಲು ಆಶಿಸುವ ತರುಣ ಗಾಳಿ, ಅಲೆದಾಡುವ ಸೆರಗಿಗೆ ಆಕರ್ಷಿತವಾಗಿ ನಲಿದಾಡುವ ಬೆರಳು, ಕೈಗೆ ಸಿಗದೆ ಹಾರಿಹೋಗುವ ಹೆಣ್ಣು ತುಂಬಿ, ಅದನ್ನು ತನ್ನತ್ತ ಸೆಳೆಯಲಾಗದೆ ಪರಿತಪಿಸಿ ತೇಲಾಡಿ ಬಾಯ್ಬಿಡುವ ಗಂಡು ತಾವರೆಯ ಪ್ರತಿಮೆಗಳು ಇದ್ದು, ಅವು ಒಂದು ಮಧುರ ಭಾವನಾಂಕುರದ ಚಿತ್ರವನ್ನು ನೀಡುತ್ತವೆ.

ಕೃಷ್ಣಕುಮಾರಿ (೧೯೨೨) ಪುಸ್ತಕ ರೂಪದಲ್ಲಿ ಪ್ರಕಾಶಿತವಾದ ಬೇಂದ್ರೆಯವರ ಪ್ರಥಮ ಕೃತಿ. ಇವರ ಕಾವ್ಯೋದ್ಯೋಗದ ಪ್ರಯೋಗಾವಸ್ಥೆಯಲ್ಲಿ ಜನಿಸಿದುದು, ಕಾಮ ಪ್ರೇಮವಾಗಿ, ಸೌಂದರ್ಯ ಸತ್ಯವಾಗಿ ಪರಿವರ್ತನೆಗೊಳ್ಳುವ ಆಧ್ಯಾತ್ಮಿಕ ಕ್ರಿಯೆಯ ಸೂಚನೆ 'ಕೃಷ್ಣಕುಮಾರಿ'ಯಲ್ಲಿ ಇದೆ. ಈ ದೃಷ್ಟಿಯಿಂದ ಇದು ಪ್ರಾರಂಭದ ಕವಿತೆಯಾದರೂ, ಬೇಂದ್ರೆ ದರ್ಶನದ ಅವಿಭಾಜ್ಯ ಅಂಗವೆಂದೇ ಹೇಳಬಹುದು.

ಬೇಂದ್ರೆಯವರ 'ಬಡವರ ಮಗಳು' ಕವನದಲ್ಲಿ ಹೆಣ್ಣನ್ನು ಒಲಿಸಿಕೊಳ್ಳುವುದು ಎಷ್ಟು ಕಷ್ಟ. ಆಕೆಯ ಪ್ರೀತಿ ಸಂಪಾದಿಸಲು ಆ ಹೆಣ್ಣಿನ ಹೃದಯ ಗೆಲ್ಲಲು ಯುವಕನ ಪ್ರಯತ್ನ ಹೇಗಿರುತ್ತದೆಂದು ತಿಳಿಯಬಹುದು. ಹೆಣ್ಣೊಂದು ಒಲಿಯುವುದು ಅಷ್ಟು ಸುಲಭವಲ್ಲ. ಅಲ್ಲಿ ಬಡತನ-ಸಿರಿತನ ಮುಖ್ಯವಾಗುವುದಿಲ್ಲ ಪ್ರೇಮ ಮಾತ್ರ ಮುಖ್ಯವಾಗುತ್ತದೆ. ಈ ಕವನದಲ್ಲಿ ಆ ಹೆಣ್ಣನ್ನು ಒಲಿಸಿಕೊಳ್ಳಲು ಪ್ರಯತ್ನಿಸಿ, ಸೋತ ಭಾವವಿದ್ದು ಅವಳನ್ನು ಹಂಗಿಸುವುದರ ಮೂಲಕ ಅವಳ ಅಹಂ ಅನ್ನು ಅಲುಗಿಸಿ, ಯೌವನ ಸಹಜವಾದ ಅವಳ ಆಸೆಯನ್ನು ಕೆರಳಿಸಿ, ಕೊನೆಗೆ ತನ್ನ ಸಿರಿತನದಿಂದಾದರೂ ಒಲಿಸಿಕೊಳ್ಳಬೇಕೆಂಬ ಯುವಕನ ಪ್ರಣಯದ ಚಿತ್ರ ಈ ಕವನದಲ್ಲಿ ಮೂಡಿ ಬಂದಿದೆ.

"ಮಾವು ಚಿಗಿತು ಮಲ್ಲಿಗೆ ಹೂತು
ಸುಗ್ಗಿ ಬಂದು ಮಗ್ಗಿಯ ಇರುವಿ
ಕಣ್ಣು ಮುಚ್ಚಿ ನಿನ್ನ ನೆನೆದೇ
ಎದಿ ಮುಗುಳು ತೆರೆಯಲೊಲ್ಲಿ"

ಬಡವರ ಮಗಳನ್ನುದ್ದೇಶಿಸಿ ಯುವಕ ಹೇಳುವ ಈ ಮಾತಿನಲ್ಲಿ ಯೌವನಸ್ಥಳಾದರೂ ಮಗ್ಗಿಯಾಗಿಯೇ ಇರುವುದು, ಆ ಯುವಕ ಅವಳು ಅರಳಲು ಕಾಯುವುದು – ರೂಪಕ ಭಾಷೆಯಲ್ಲಿ ಬಣ್ಣಿಸಲಾಗಿದೆ. ಇಲ್ಲಿ ಹೆಣ್ಣು ತನ್ನ ಯಾವುದೇ ಭಾವನೆಗಳನ್ನು ತೋರ್ಪಡಿಸದಿದ್ದರೂ, ಅವಳ ರೂಪಕ ಚೆಲುವಿಗೆ ಹಾಗೂ ಅವಳ ಮೌನಕ್ಕೆ ಮನಸೋತ ಯುವಕನ ಮನೋಭಾವವನ್ನು ತಿಳಿಯಪಡಿಸುತ್ತದೆ.

'ಬಂಗಾರ ಮಾಡದಿಂದ
ಸಿಂಗಾರದ ಮಳೆಗರಸೇನ
ಹ್ಯಾಂಗಾರ ಕಣ್ಮನಸೆತ್ತಿ
ಒಮ್ಮೆ ನೋಡ ಒಮ್ಮೆ ನೋಡ'

ಈ ರೀತಿ ಬಡವರ ಮಗಳು ದಿಟ್ಟತನದಿಂದ ನಿಶ್ಚಲ ನಡೆಯಿಂದ ಸಿರಿವಂತಿಕೆಯನ್ನು ಧಿಕ್ಕರಿಸಿದಾಗ, ಹೇಗಾದರೂ ಮಾಡಿ ಆಕೆಯನ್ನು ಒಲಿಸಿಕೊಳ್ಳಲೇಬೇಕೆಂದು ದೀನನಾಗಿ ಈ ಪರಿತಪಿಸುತ್ತಾನೆ. ಈ ಬಗೆಯಲ್ಲಿ ಆತ ಪ್ರೇಮಕ್ಕಾಗಿ ಯಾಚಿಸುವುದನ್ನು ನೋಡಿದರೆ, ಆತ ನಿಜವಾದ ಪ್ರಣಯಿ ಎನಿಸುತ್ತದೆ. ಹೀಗೆ ಸಮಾಜದ ಬಡವ-ಬಲ್ಲಿದ ಯುವತಿ-ಯುವಕರ ಪ್ರೀತಿಯ ಒಂದು ಮುಖವನ್ನು ನಮ್ಮ ಸಮಾಜದ ವಾಸ್ತವ ನೆಲೆಯಲ್ಲಿ ಚಿತ್ರಿಸಿರುವ ಕವನ ಇದಾಗಿದೆ.

ಬೇಂದ್ರೆಯವರು 'ನಕ್ಷತ್ರ' (ಮುಗಿಲ ಮಲ್ಲಿಗೆ', ದ.ರಾ. ಬೇಂದ್ರೆ, ಪ್ರತಿಭಾ ಮುದ್ರಣ, 1961, ಪು. 75) ಎಂಬ ಕವನದಲ್ಲಿ,

'ಗದ್ದವನೆತ್ತಿ ಮುದ್ದಿಸುವ ಕಣ್ಣು
ಇರದಿರೆ ಕತ್ತನು ಎತ್ತದು ಹೆಣ್ಣು'

ಎಂದಿರುವ ನುಡಿ ಹೆಣ್ಣು ನಿಜ ಪ್ರೀತಿಗಾಗಿ ಆಶಿಸುವುದನ್ನು ತಿಳಿಸುತ್ತದೆ. ಬಡತನ-ಸಿರಿತನವನ್ನು ಮೀರಿದ ಒಲವು ಹೆಣ್ಣು-ಗಂಡಿನ ದೇಹದಲ್ಲಿ ಮೂಡಬೇಕು. ಅದಿಲ್ಲದಿದ್ದರೆ, ಒಲವಿನ ದೀಪ ಬೆಳಗುವುದಿಲ್ಲ ಎಂದಿದ್ದಾರೆ.

ಬೇಂದ್ರೆಯವರ 'ಕಾಮಕಸ್ತೂರಿ'ಯಲ್ಲಿ ಪುರಷ ಮತ್ತು ಪ್ರಕೃತಿಯ ಸಂಬಂಧದ ಚಿತ್ರಣ ವೈವಿಧ್ಯಮಯವಾಗಿ ಮೂಡಿಬಂದಿದೆ. 'ಕಾಮಕಸ್ತೂರಿ' ಎಂಬುದು ಒಂದು ಜಾಣ್ನುಡಿ. ಬೇಂದ್ರೆಯವರು ಜೀವನವನ್ನೇ ಪ್ರೀತಿಸಿದವರು. ಕಾಮವನ್ನು ಪ್ರೀತಿಸಿದ್ದು ಸಹಜವೇ. ಆದುದರಿಂದಲೇ ಅವರು ಕಾಮವನ್ನು ವೈವಿಧ್ಯಮಯವಾಗಿ ವರ್ಣಿಸಲು ಸಾಧ್ಯವಾಗಿದೆ.

'ಕಾಮಕಸ್ತೂರಿ' ಎಂಬುದು ತುಳಸಿ ಜಾತಿಗೆ ಸೇರಿದ ಒಂದು ಸುವಾಸನೆ ಭರಿತವಾದ ಸಸ್ಯ ಈ ಕವನದಲ್ಲಿ ಪ್ರಣಯ ಹೊಲದ ಹತ್ತಿರ ತಾನೇ ಬೆಳೆದ 'ಕಾಮಕಸ್ತೂರಿ'ಯನ್ನು ಕಿತ್ತು 'ತುಂಬಿ ತುರುಬಿನವಳಾದ ಪ್ರಿಯತಮೆಗೆ ಒಲವಿನಿಂದ ಮುಡಿಸಲು ಕಾತರಗೊಳ್ಳುತ್ತಿರುವ ಭಾವ ಇಲ್ಲಿದೆ. ಅಲ್ಲಿಯ ಪ್ರೇಯಸಿಯನ್ನು 'ತುಂಬಿತುರುಬಿನವಳು' ಎಂದು ವರ್ಣಿಸುತ್ತಾ ಅವಳ ಕೇಶಸೌಂದರ್ಯದ ಬಗ್ಗೆ ಮೈಮರೆತವನಾಗಿದ್ದಾನೆ.

'ಅವನ್ಸ ನೀ ಮುಡಿದಂದ
ಮುಡಿದಂಥ ಮುಡಿಯಿಂದ
ಗಾಳಿಯ ಸುಳಿಯೊಂದ
ಬಂದೆನಗೆ ತಗಲಿದಂದ
ತಣಿತಣಿವಂದ
ಈ ಮನಕ'

ಮೇಲಿನ ಸಾಲುಗಳನ್ನು ಗಮನಿಸಿದಾಗ ಪ್ರಣಯಿಯ ಮನದಾಳದ ಭಾವನೆಗಳು ಸಹಜ ಹಾಗೂ ಸರಳವಾಗಿರುವುದು ಕಾಣುತ್ತದೆ. ತನ್ನ ಪ್ರೇಯಸಿಯನ್ನು ಸದಾ ನೆನೆಯುತ್ತಾ, ಆಕೆ ಅಲ್ಲಿಲ್ಲದಿದ್ದರೂಅವಳನ್ನು ತನ್ನ ಮನದಲ್ಲೇ ಕಲ್ಪಿಸಿ, ಆಕೆಗೆ ಕಾಮಕಸ್ತೂರಿಯನ್ನು ಪ್ರೀತಿಯಿಂದ ಮುಡಿಸುವುದು ಕಂಡುಬರುತ್ತದೆ.

'ಅನ್ನೋ ಜನರು ಏನು
ಅಂತ್ಯನ ಇರತಾರ
ಹೊರತಾದೆ ನೀ ಜನಕ'

ಜನ ಇವನು ಪರಿತಪಿಸುವ ರೀತಿಯನ್ನು ಕಂಡು ಏನೇನೋ ಮಾತಾಡಿಕೊಂಡರೂ, ಅದರ ಪರಿವೇ ಇಲ್ಲದೇ ಒಬ್ಬರಿಗೊಬ್ಬರು ಮನ ಸೋತಿರುವುದು ಅವನಿಗೆ ಮುಖ್ಯವಾಗಿದೆ. ಇವನ ಈ ನುಡಿಗಳು ಅವನ ಪ್ರೀತಿಯ ಉನ್ಮತ್ತತೆಯನ್ನು, ಕಾಮವನ್ನು ಕಸ್ತೂರಿಯಾಗಿ ಪರಿವರ್ತಿಸಿಕೊಳ್ಳಬೇಕೆಂಬ ಸಂದೇಶವನ್ನು ಸಾರುತ್ತಿದೆ.

'ಕಾಮಕಸ್ತೂರಿ'ಯ ಹಾದಿಯಲ್ಲೇ ಬರುವ ಮತ್ತೊಂದು ಕವನವೆಂದರೆ, 'ಇಂದ್ರ ಹೂ-ಚಂದ್ರಹೂ; (ಉಯ್ಯಾಲೆ, ದ.ರಾ. ಬೇಂದ್ರೆ, ಸಮಾಜ ಪುಸ್ತಕಾಲಯ, ಧಾರವಾಡ ೧೯೮೦, ಪುಟ. ೭೪) ಈ ಕವನದ ನಾಯಕ ತನ್ನ ಪ್ರೇಯಸಿಯನ್ನು ನೆನೆದು ಅವಳಿಗಾಗಿ 'ಇಂದರ ಹೂ ಚಂದರ ಹೂ। ಚೆಂದ ಚೆಂದದ ಹೂ'ಗಳನ್ನು ಆಯ್ದು ತಂದು ಅವಳ ಬರುವಿಕೆಯನ್ನು ನಿರೀಕ್ಷಿಸುತ್ತಿದ್ದಾನೆ. 'ಈ ಕವಿತೆಯಲ್ಲಿ ಕೇಳಿ ಬರುವ ನಲ್ಲನ ಯಾಚನೆಯ ಧ್ವನಿಯಲ್ಲಿ

ಅರ್ಪಣಾಭಾವ, ದೈನ್ಯ, ಆರ್ತತೆಗಳು ತೆರೆತೆರೆಯಾಗಿ ಬಂದು ಮನಸ್ಸನ್ನು ಕಲಕುತ್ತವೆ' ಎಂದು ಜಿ. ಎಸ್. ಆಮೂರ ಅವರು ನುಡಿದಿದ್ದಾರೆ.

'ಕಾಮಕಸ್ತೂರಿ'ಯ ಸಂಗ್ರಹದೊಳಗಿನ ಎಲ್ಲಾ ಕವನಗಳು ತರುಣ-ತರುಣಿಯರಿಗೆ ಪ್ರಣಯಾವಧಿಯಲ್ಲಿ ಮತ್ತು ವೃದ್ಧರಿಗೆ ಚಿಂತನೆಯ ಸಿಂಹಾವಲೋಕನದಲ್ಲಿ ಪ್ರಿಯ-ವಾಗಬಹುದಾದ ಗೀತಗಳಾಗಿವೆ. ಕಾಮಕಸ್ತೂರಿಯಲ್ಲಿ ಕಾಮ ಎಂದರೆ, ಮದ ಮತ್ತು ಕಸ್ತೂರಿ ಎಂದರೆ ಸುಗಂಧಿತ ಮಣ್ಣು. ಕಾಮದ ಭಕ್ತಿಭಾವದ ಪರಿವರ್ತನೆಯನ್ನು ಮಾಡಿಕೊಳ್ಳಬೇಕು ಎಂಬುದಾಗಿ ಅಂಬಿಕಾತನಯದತ್ತರ ಒಲವಿನ ಪದ್ಯಗಳು ಸಾರುತ್ತವೆ.

"ಕೊಡುವುದೇನು? ಕೊಂಬುದೇನು?
ಒಲವು, ಸ್ನೇಹ, ಪ್ರೇಮ
ಹೊರಗೆ ಬರಿದು, ಒಳಗೆ ಬಲಿದು
ಇದ್ದವರಿಗೆ ನೇಮ"

ಇದು ಅಂಬಿಕಾತನಯದತ್ತರ ದೃಷ್ಟಿಕೋನ. ಬೇಂದ್ರೆಯವರ ಒಲವಿನ ಪದ್ಯಗಳನ್ನು ಜನಸಾಮಾನ್ಯರ ಬೇಡಿಕೆಗಳಿಗೆ ತಕ್ಕಂತೆ ಶೃಂಗಾರಿಕ ಅಥವಾ ಲೈಂಗಿಕ ಭಾವೋದ್ದೀಪನ-ವಾಗದಂತೆ ಹಾಡಿಕೊಳ್ಳುವುದು ಕಾವ್ಯಕ್ಕೆ ಅಪಮಾನ ಮಾಡಿದಂತೆ.

ಇಲ್ಲಿ ಪ್ರೀತಿ ಎಂಬುದು ದೈಹಿಕ ಒಲವು, ಸ್ನೇಹ, ಪ್ರೇಮ ಎಂಬುವು ಆತ್ಮದ ಭಾವ – ಇದು ಇಲ್ಲಿಯ ಧ್ವನಿ.

"ಒಲವೆಂಬ ಹೊತ್ತಿಗೆಯನೋದ ಬಯಸುತ ನೀನು
ಬೆಲೆಯೆಷ್ಟು ಎಂದು ಕೇಳುತಿಹೆ? ಹುಚ್ಚ!
ಹಗಲಿರುಳು ದುಡಿದರೂ ಹಲುಜನುಮ ಕಳೆದರೂ
ನೀ ತೆತ್ತಲಾರೆ ಬರಿ ಅಂಚೆವೆಚ್ಚ" (ಉಯ್ಯಾಲೆ, ಒಲವೆಂಬ ಹೊತ್ತಿಗೆ)

ಮೇಲಿನ ಸಾಲುಗಳಲ್ಲಿ ಬೇಂದ್ರೆಯವರು ಹೇಳಿದಂತೆ ಒಲವಿನ ಹಂತಗಳನ್ನು ಅಳೆಯುವುದು ಕಷ್ಟ. ಹದಿಹರೆಯದವರು ಕೇವಲ ದೈಹಿಕ ಆಕರ್ಷಣೆ, ಸೌಂದರ್ಯಕ್ಕೆ ಮಾರುಹೋಗುತ್ತಾರೆ. ಅಂತಹ ಕವನವೊಂದು ಅವರ 'ಪೋರ-ಪೋರಿ' ಕವನವಾಗಿದೆ. ಯೌವನದ ಅದಮ್ಯ ತುಡಿತಕ್ಕೆ ಒಳಗಾಗಿ ಹೊಸ ಹರೆಯದ ಜೀವಗಳು ಹಿಂದು ಮುಂದನ್ನು ನೋಡದೆ ಉತ್ಸಾಹದಲ್ಲಿ ಹೇಗೆ ಒಂದಾಗುತ್ತಾರೆ ಎಂಬ ಹೊಸ ಯೌವನದ ವಿವರಗಳನ್ನು ಈ ಕವನ ಒಳಗೊಂಡಿದೆ.

"ಪೋರೀ ನೀನು, ನಾನು ಪೋರಾ
ಮಾರಿ ಕಣ್ಣಿಗೆ ಮರುಳಾಗಿ
ನೆಚ್ಚಿ ಮೆಚ್ಚಿ ಕೂಡಿದ್ದೇವ
ಬೇರೆ ಇಲ್ಲಾ! ಇದ್ದರೆ..........
ಶಿವನೇ ಬಲ್ಲಾ" (ನಾದಲೀಲೆ)

ಈ ಕವನದಲ್ಲಿ ನಾಯಕ ತನ್ನ ಪ್ರಿಯೆಗೆ ಈ ರೀತಿ ಹೇಳಿದ್ದಾನೆ. ಸಾಮಾನ್ಯವಾಗಿ ಯುವಕ-ಯುವತಿಯರಲ್ಲಿ ಪರಸ್ಪರ ಆಕರ್ಷಣೆ ಪ್ರಕೃತಿ ಸಹಜವಾಗಿರುತ್ತದೆ. ಆದರೆ, ಅವರಿಬ್ಬರ ತೊಡಗುವಿಕೆ, ಕೂಡುವಿಕೆಯಲ್ಲಿ ಒಂದು ಸಂಯಮವಿರಬೇಕು. ಆಗ ಮಾತ್ರ ಆ ಪ್ರೀತಿ ಮನಮೋಹಕವಾಗಿರುತ್ತದೆ. ಇಂತಹ ಅಪೂರ್ವ ಪ್ರೇಮದ ಸುಂದರ ಸಹಜ ಚಿತ್ರಹ ಈ ಪೋರ-ಪೋರಿ ಕವನದಲ್ಲಿದೆ.

ಈ ಪೋರ-ಪೋರಿ ಪರಸ್ಪರ ಒಬ್ಬರನ್ನೊಬ್ಬರು ಮೆಚ್ಚಿಕೂಡಿರುವುದು ನಿಜ ಯಾಕೆ? ಏನು? ಎಲ್ಲಿಗಂತ ಇಬ್ಬರೂ ಪ್ರಶ್ನೆಯನ್ನೂ ಮಾಡದೆ, ಪ್ರೇಮ ಪ್ರವಾಹದಲ್ಲಿ ತೇಲುತ್ತಿದ್ದಾರೆ. ಬಾಹ್ಯ ಪ್ರಪಂಚದ ಹಂಗಿಲ್ಲದೆ, ಯಾರ ಭಯವೂ ಕಾಡದೆ, ಉತ್ತುಂಗ ಸ್ಥಿತಿಯಲ್ಲಿ ಇವರ ಸಾತ್ವಿಕ ಪ್ರೇಮ ಹರಿದಾಡಿದೆ.

"ಆಡಿದ್ದೊಂದ ನೋಡಿದೊಂದ
ಹೂಡಿದ್ದೊಂದ ಕೂಡಿದ್ದೊಂದ
ಬೇರೆ ಮಾತು ನನಗ ನಿನಗ
ಗೊತ್ತ ಇಲ್ಲಾ! ಗುಟ್ಟು
ಶಿವನೇ ಬಲ್ಲಾ"

ಹೀಗೆ 'ಪೋರಿ-ಪೋರ' (ನಲ್ಲ-ನಲ್ಲೆ)ಯರು ಪರಸ್ಪರ ಆಕರ್ಷಣೆಯಲ್ಲಿ ತಮ್ಮದೇ ಒಂದು ಲೋಕವನ್ನು ಸೃಷ್ಟಿಸಿಕೊಂಡು ಅದರಲ್ಲಿ ತನ್ಮಯರಾಗಿ ಬಿಡುತ್ತಾರೆ. ಒಟ್ಟಿನಲ್ಲಿ ಇವರಿಗೆ ದುಃಖದ ಸೋಂಕಿಲ್ಲ. ಆದರೆ, ಒಲುಮೆ ಒಂದು ನಂಬಿಕೆಯಾಗಿ ಕಾಲ್ಪನಿಕ ಲೋಕದಲ್ಲಿ ವಿಹರಿಸುತ್ತಾ ಬೇರೆಲ್ಲವನ್ನು ಮರೆತಂಥ ಅಪೂರ್ವ ಪ್ರೇಮಿಗಳಾಗಿದ್ದಾರೆ. ಇವರು ವಾಸ್ತವ ಜಗತ್ತಿನಿಂದ ದೂರ ನಿಲ್ಲಲು ಪ್ರಯತ್ನಿಸಿದ್ದಾರೆ. ಅಂದರೆ, ಇವರಲ್ಲಿ ಯಾವುದೇ ಜಾತಿ-ಭೇದವಾಗಲೀ, ಸಿರಿತನ-ಬಡತನದ ಅಂತಸ್ತಿನ ಪ್ರಶ್ನೆಯಾಗಲೀ ಕಾಡುವುದಿಲ್ಲ. ಹೊಸ ಯೌವನದ ಜೋಡಿಗಳು ತಮ್ಮ ಮುಗ್ಧ ಪ್ರೇಮವೇ ಮುಖ್ಯವೆಂದು ಇಲ್ಲಿ ಬಿಂಬಿಸುತ್ತಾರೆ

ಪ್ರಕೃತಿಯಲ್ಲಿರುವ ಸಹಜ ಆಕರ್ಷಣೆ, ಪ್ರೇಮದ ಬಂಧ, ಮಿಲನದ ತೀವ್ರತೆ ಬೇಂದ್ರೆಯವರ 'ಅನಂತ ಪ್ರಣಯ' ಕವನದಲ್ಲಿದೆ. ಸೂರ್ಯ-ಚಂದ್ರರಲ್ಲಿರುವ

ಆಕರ್ಷಣೆಯನ್ನು ಆಧರಿಸಿ ಅದನ್ನು ಹೆಣ್ಣು ಗಂಡಿನ ಪ್ರೀತಿಯಾಗಿಸಿ ಒಂದು ನಿರಂತರ ರೂಪಕವಾಗಿ ಬೇಂದ್ರೆಯವರು ಬಣ್ಣಿಸಿದ್ದಾರೆ. ಇದೊಂದು ನವೀನ ರೀತಿಯ ಕಲ್ಪನೆ ಹಾಗೂ ಅವರ ಉಜ್ವಲವಾದ ಪ್ರತಿಭೆಗೆ ಸಾಕ್ಷಿಯಾಗಿದೆ. ಅದನ್ನೇ ಅವರು 'ಅನಂತ ಪ್ರಣಯ' ಎಂದು ಕರೆಯುವುದು. ಕವಿಯ ದೃಷ್ಟಿಯಲ್ಲಿ ಚಂದ್ರ ಪ್ರಿಯೆಯಾಗಿ ಅವರಲ್ಲಿ ಪ್ರೀತಿಯ ಪ್ರವಾಹ ಹರಿಸಲು ಕಾರಣವಾಗಿದೆ. ಸೂರ್ಯ–ಚಂದ್ರರ ಮಧ್ಯೆಯಿರುವ ಭೂಮಿಯನ್ನು ಕವಿಯು ಪ್ರಿಯರ ಭೇಟಿಯ ಸಂಕೇತ ಸ್ಥಾನ ಅಭಿಸಾರವಾಗಿಸಿದ್ದಾರೆ.

ಉತ್ತರ ಧ್ರುವದಿಂದ ದಕ್ಷಿಣ ಧ್ರುವಕೂ
ಚುಂಬಕ ಗಾಳಿಯು ಬೀಸುತಿದೆ.
ಸೂರ್ಯನ ಬಿಂಬಕೆ ಚಂದ್ರನ ಬಿಂಬವು
ರಂಬಿಸಿ ನಗೆಯಲಿ ಮೀಸುತಿದೆ.

ಪ್ರಣಯಗಳು ಒಟ್ಟುಗೂಡಲು ನಿಶ್ಚಯಿಸುವ ಸ್ಥಳ – ಅಭಿಸಾರ. ಎಂತಹ ಸುಂದರ ಕಲ್ಪನೆ! ಇಲ್ಲಿ ಅರಳಿದ ಕಾವ್ಯಪ್ರೇಮಿಗಳ ಹೃದಯವನ್ನು ತಲ್ಲಣಗೊಳಿಸುವ ಚುಂಬಕ ಶಕ್ತಿಯನ್ನು ಈ ಕಾವ್ಯ ಹೊಂದಿದೆ.

ಭೂ ರಂಗಕೆ ಅಭಿಸಾರಕೆ ಕರೆಯುತ
ತಿಂಗಳು ತಿಂಗಳು ಸವೆಯುತಿದೆ.
ತುಂಬುತ ತುಳುಕುತ ತೀರುತ ತನ್ನೊಳು
ತಾನೇ ಸವಿಯನು ಸವಿಯುತಿದೆ.

ಪ್ರಕೃತಿ ಸಹಜವಾಗಿ ಉತ್ತರ ಧ್ರುವದಿಂದ ದಕ್ಷಿಣ ಧ್ರುವಕ್ಕೆ ಮುದ್ದಿಡುವ ಲೋಹ ಚುಂಬಕದ ಗಾಳಿ ಬೀಸುತ್ತಿದೆ. ಅದರ ಬೀಸಿಗೆ ಅದರೊಡನೆ ಬರುವ ಸೂರ್ಯಮಂಡಲದ ಪ್ರಕಾಶದಲ್ಲಿ ಚಂದ್ರನ ಪ್ರತಿರೂಪ ಹೊಳೆದು ಅದನ್ನು ಪಡೆಯುವ ಆಸೆಯಿಂದ 'ನಗೆಯಲಿ ಮೀಸುತಿದೆ'. ಇದು ಹೆಣ್ಣಾದ ಚಂದ್ರ ಸೂರ್ಯನಿಂದ ಆಕರ್ಷಿತನಾಗಿ ಅವನನ್ನು ಸೇರಲೇಬೇಕೆಂಬ ಆಸೆಯಿಂದ ತವಕಿಸುತ್ತಿರುವುದಾಗಿದೆ. ನಂತರ ಸೂರ್ಯನಿಂದ ಆಕರ್ಷಣೆಗೊಳಗಾದ ಪ್ರಿಯೆ ಚಂದ್ರ ಈ ಭೂಮಿಯನ್ನೇ ತಮ್ಮಿಬ್ಬರು ಕೂಡಲು ಇರುವ ಅಭಿಸಾರ ಎಂದು ಕಾಯುತ್ತಾಳೆ. ಆದರೆ, ಸೂರ್ಯನು ಅಭಿಸಾರಕೆ ಬಾರದಿರುವುದನ್ನು ಕಂಡು 'ತಿಂಗಳು ತಿಂಗಳು ಸವೆಯುತಿದೆ. ಅಂದರೆ, ಹೆಣ್ಣಿನ ಪ್ರತಿರೂಪ ಚಂದ್ರ ತನ್ನ ಪ್ರಿಯಕರನನ್ನು ಸಂಧಿಸಲಾರದೆ ತಾನೇ ತಿಂಗಳು ತಿಂಗಳು ಸವೆದು ಹೋಗುವುದನ್ನು ವ್ಯಕ್ತಪಡಿಸುತ್ತದೆ.

ಇದೆಲ್ಲಾ ಕೋಟ್ಯಾನುಕೋಟಿ ವರ್ಷಗಳಿಂದಲೇ ನಡೆಯುತ್ತಿದ್ದರೂ ಪ್ರಿಯೆ ಚಂದ್ರಳಿಗೆ ಸೂರ್ಯನ ಮೇಲಿನ ಆಸೆ ಸ್ವಲ್ಪವೂ ಕಡಿಮೆಯಾಗಿಲ್ಲ. ನಕ್ಷತ್ರಗಳ ಗುಂಪಿನ ನಡುವೆ

ಹೊಳೆಯುತ್ತಿದ್ದರೂ, ವಿರಹದಿಂದ ಅವುಗಳೊಡನೆ ಓಡಿ ಹೋಗಿಲ್ಲ. ಅಮಾವಾಸ್ಯೆಯ ದಿನ ಆಕೆ ಕರಗಿಹೋದರೂ ನಂತರ ಬಿದಿಗೆಯ ದಿನ ಕಂಡರೂ ಮಿತ್ರನೊಂದಿಗೆ ಸೇರಿದ ಗುರುತು ಕಾಣಿಸದಾಗಿದೆ.

'ಬಿದಿಗೆಯ ಬಿಂಬಾಧರದಲಿ ಇಂದಿಗೂ
ಮಿಲನದ ಚಿಹ್ನೆಯ ತೋರದಿದೆ'
(ನಾದಲೀಲೆ, ಪೂರ್ವೋಕ್ತಿ, ಪುಟ ೫೦)

ಅನುರಾಗ ಗೀತೆಗಳಲ್ಲಿ ಒಂದಾದ 'ರಾಗರತಿ' ಎಂಬ ಕವನದಲ್ಲಿ 'ಮುಗಿಲ ಮಾರಿಗೆ ರಾಗರತಿಯ ನಂಜ ಏರಿತ್ತ ಆಗ ಸಂಜೆಯಾಗಿತ್ತಾ.... ಬೊಗಸಿಗಣ್ಣಿನಾ ಬಯಕೆಯ ಹೆಣ್ಣು ನೀರಿಗೆ ಹೋಗಿತ್ತ ತಿರುಗಿ ಮನೀಗೆ ಸಾಗಿತ್ತ;..... ಹೀಗೆ ಕಾಣಬರುವ ಈ ಕವನದಲ್ಲಿ ಮುಸ್ಸಂಜೆಯಲ್ಲಿ ಒಬ್ಬ ಹೆಣ್ಣು ಮಗಳು ನೀರಿಗಾಗಿ ಬಾವಿಯ ಬಳಿ ಹೋಗಿ ಮತ್ತೆ ಮನೆಯತ್ತ ಮರಳುವ ಚಿತ್ರ. ಸಂಧ್ಯಾಕಾಲದ ಈ ಸಮಯದಲ್ಲಿ ಮನದೊಳಗೆ ಉಂಟಾಗುವ ಹರೆಯದ ಭಾವನೆಗಳ ತಾಕಲಾಟವನ್ನು ಕವಿ ಉಪಮಾ, ಉತ್ಪ್ರೇಕ್ಷೆಗಳಿಂದ ಬಣ್ಣಿಸಿದ್ದಾರೆ. ಸಾಯಂಕಾಲದ ವೇಳೆ ಗಂಡು–ಹೆಣ್ಣಿನ ಮನದಲ್ಲಿ ಹಲವಾರು ಭಾವನೆಗಳು ಮೈದುಂಬಿ ನಂಜೇರಿದಂತಾಗಬಹುದು ಇಲ್ಲವೇ ಸಂತೋಷವೂ ನೀಡಬಹುದು. ಈ ಕವನದಲ್ಲಿ ಹರೆಯದ ಗಂಡು–ಹೆಣ್ಣಿನ ಮೋಹಕ ಭಾವನೆಗಳು ಹೇಗೆ ಉದ್ರೇಕಿಸುತ್ತವೆ ಎಂಬುದನ್ನು ತಿಳಿಸುತ್ತದೆ.

ಹೀಗೆ ಪ್ರಕೃತಿಯ ಹಿನ್ನೆಲೆಯಲ್ಲಿ ಬರೆದ ಈ ಕವನ ಪ್ರೇಮೋತ್ಕಾರಕ್ಕೆ ಅಂದರೆ, ಪ್ರೇಮವರ್ಧನೆಗೆ ಸಾಕ್ಷಿಯಾಗಿದೆ. ಬೇಂದ್ರೆಯವರ 'ಮುಗಿಲ ಮಾರಿಗೆ' ಕವನ ಲೋಕಪ್ರಿಯವಾದ ಗೀತೆ.

"ಮುಗಿಲ ಮಾರಿಗ್ಯ ರಾಗರತಿಯ ನಂಜು ಏರಿತ್ತ
ಆಗ ಸಂಜೆಯಾಗಿತ್ತ–
ನೆಲದ ಅಂಚಿಗೆ ಮಂಜಿನ ಮುಸುಕು ಹ್ಯಾಂಗೋ ಬಿದ್ದಿತ್ತ್ಯ
ಗಾಳಿಗೆ ಮೇಲಕ್ಕೆದ್ದಿತ್ತ್ಯ ('ಗರಿ'. ದ.ರಾ.ಬೇಂದ್ರೆ, ಪುಟ 64)

"ಬೊಗಸೆಗಣ್ಣಿನ ಬಯಕೆಯ ಹೆಣ್ಣು ನೀರಿಗೆ ಹೋಗಿತ್ತ
ತಿರುಗಿ ಮನೀಗೆ ಸಾಗಿತ್ತ;
ಮಳ್ಳಗಾಳಿ–ಸುಳಿ ಕಳ್ಳ ಕೈಲೆ ಸೆರಗನು ಹಿಡಿತ್ತಿತ್ತ್ಯ
ಮಟಮಟ ಬೆರಗಿಲೆ ಬಿಡತಿತ್ತ; (ಅದೇ ಪುಟ)

ಹೀಗೆ ಪ್ರಕೃತಿಯೊಂದಿಗೆ ಹೆಣ್ಣು–ಗಂಡಿನ ಒಲಪಿನ ಚಿಲುಮೆಯನ್ನು ಸಮೀಕರಿಸಿ ಹಲವಾರು ಪದ್ಯಗಳನ್ನು ಚಿತ್ರಿಸಿದ್ದಾರೆ. ಆದರ್ಶ ಪ್ರೇಮದ ನಾಯಕಿಯು ನವುರು ನವುರಾದ

ದಾಂಪತ್ಯದ ಸವಿ ಸೊಬಗುಗಳನ್ನು ಅತ್ಯಂತ ಆಹ್ಲಾದಕರ ಮತ್ತು ಆತ್ಮೀಯವಾದ ಬಗೆಯಲ್ಲಿ ತೋಡಿಕೊಳ್ಳುವ ಕವಿತೆ 'ನಾನು ಬಡವಿ ಆತ ಬಡವ', ಈ ಕವನದಲ್ಲಿ ಬೇಂದ್ರೆಯವರ ಬಡತನದ ನೋವು ಮತ್ತು ದಾಂಪತ್ಯದ ಎದೆಯಾಳದ ಪ್ರೀತಿಯನ್ನು ಗುರುತಿಸಬಹುದು. ದಾಂಪತ್ಯದ ಸುಖಸಂತೃಪ್ತಿಗೆ ಕೇವಲ ಹಣ, ಒಡವೆಯೇ ಮುಖ್ಯವಲ್ಲ. ಸತಿ–ಪತಿಯರ ಒಲವು ಮುಖ್ಯ ಎಂಬುದನ್ನು ಧ್ವನಿಸುತ್ತದೆ. ಈ ಕವಿತೆಯ ಮೂಲಕ ಬಡವರ ಹಾಡನ್ನು ಹಾಡುತ್ತ ಅವರ ಸರಳ ಸಹಜ ನುಡಿಯನ್ನು ಬಳಸಿ ಅದು ಜನರ ಮನಸ್ಸನ್ನು ಮುಟ್ಟುವಂತೆ ಮಾಡಿರುವುದೇ ಇದರ ವೈಶಿಷ್ಟ್ಯವಾಗಿದೆ.

"ನಾನು ಬಡವಿ ಆತ ಬಡವ
ಒಲವೆ ನಮ್ಮ ಬದುಕು,
ಬಳಸಿಕೊಂಡೆವದನೆ ನಾವು
ಅದಕು ಇದಕು ಎದಕು" (ನಾದಲೀಲೆ)

ಈ ಕವನದ ನಾಯಕಿ ನುಡಿಯುವ ಈ ಮಾತುಗಳು ಈ ನಾಡಿನ ಬಡವರ್ಗದವರು ಆರ್ಥಿಕವಾಗಿ ಸಿರಿತನದಿಂದ ವಂಚಿತರಾದರೂ, ಮಾನ–ಮರ್ಯಾದೆಗಳನ್ನುಳಿಸಿಕೊಳ್ಳುತ್ತಾ, ಪ್ರೀತಿಯೇ ಮುಖ್ಯ ಎಂದು ಬದುಕುವ ರೀತಿಯನ್ನು ತಿಳಿಸುತ್ತದೆ.

"ಆತ ಕೊಟ್ಟ ವಸ್ತು ಒಡವೆ
ನನಗೆ ಅವಗೆ ಗೊತ್ತು
ತೋಳುಗಳಿಗೆ ತೋಳ ಬಂದಿ
ಕೆನ್ನೆ ತುಂಬ ಮುತ್ತು"

ಅವಳು ಹೇಳುವ ದಾಂಪತ್ಯದ ಸಿರಿತನ ಆ ದಂಪತಿಗಳಿಗೆ ಮಾತ್ರ ಚೆನ್ನಾಗಿ ತಿಳಿದಿದೆ. ಅವರಿಗೆ ಅದೇ ಮುಖ್ಯವಾದುದು. ಹಣ ಒಡವೆ ದಾಂಪತ್ಯವನ್ನು, ದಾಂಪತ್ಯದ ಬಾಂಧವ್ಯವನ್ನು ಬಿಗಿಗೊಳಿಸುವುದಿಲ್ಲ. ಪ್ರೀತಿಯೊಂದೆ ಮುಖ್ಯ ಎಂಬುದನ್ನು ಈ ಸಾಲುಗಳು ತಿಳಿಸುತ್ತವೆ. ಆತ ಪ್ರೀತಿಯಿಂದ ಕೊಟ್ಟ ಒಡವೆ, ವಸ್ತುಗಳು ಅಲೌಕಿಕವಾದುವು. ತೋಳುಗಳಿಗೆ ತೋಳಬಂದಿ ಎಂದರೆ, ಆಲಿಂಗನ; ಕೆನ್ನೆಗೆ ನೀಡಿದ ಮುತ್ತು ಇವುಗಳೇ ಆಕೆಗೆ ಸ್ವರ್ಗ. ಗಂಡನೇ ಆಕೆಯ ಸರ್ವಸ್ವ 'ಕುಂದುಕೊರತೆ ತೋರಲಿಲ್ಲ ಬೇಕು ಹೆಚ್ಚಿಗೇನು?' – ಈ ಮಾತುಗಳಲ್ಲಿ ಸುಖ ಸಮೃದ್ಧಿಯ ಜೀವನಕ್ಕೆ ಒಲವಿನಿಂದ ಕೂಡಿದ ಜೀವನವೇ ಸಾಕು. ಹೆಚ್ಚಿಗೆ ಇನ್ನೇನು ಬೇಕು ಎಂದು ಪ್ರಶ್ನಿಸಿದಂತಿದೆ. ಒಟ್ಟಾರೆ ಈ ನುಡಿ ಜೀವನದ ಜಂಜಾಟ–ದಲ್ಲಿರುವವರಿಗೆ ಸಾಂತ್ವನ ನೀಡಿದಂತಿದೆ.

ಹೀಗೆ ಬೇಂದ್ರೆಯವರ ಒಲವಿನ ಗೀತೆಗಳಲ್ಲಿ ಹಲವು ಮಜಲುಗಳನ್ನು ಕಾಣಬಹುದು. ಹಣದಿಂದ ಬಡತನ ಬಂದರೂ, ಪತಿ–ಪತ್ನಿಯರಲ್ಲಿಯ ಪ್ರೀತಿಗೆ ಬಡತನ ಬರದಿದ್ದರೆ ಸಾಕು. ಅದು ಅಕ್ಷಯ ಶ್ರೀಮಂತಿಕೆ, ಬಡತನವನ್ನು ಆಕೆ ಆದರ್ಶ ಪ್ರೇಮದ ಉದಾತ್ತತೆಯ ಮೂಲಕ ಮೀರಿ ನಿಲ್ಲುವ ಪರಿಯನ್ನು ಅವರ ಕವಿತೆಗಳಲ್ಲಿ ಅನಾವರಣಗೊಳಿಸಲಾಗಿದೆ.

## ಬೇಂದ್ರೆಯವರ ವಿರಹ ಕವನಗಳು

ಬೇಂದ್ರೆಯವರ ಪ್ರೇಮ ಮೀಮಾಂಸೆಯಲ್ಲಿ ವಿರಹಕ್ಕೆ ವಿಶಿಷ್ಟ ಸ್ಥಾನವಿದೆ. ಪ್ರೇಮದಲ್ಲಿ ಆಕಾಂಕ್ಷೆ ಮೊದಲ ಹೆಜ್ಜೆ. ಬಯಕೆ ಎಂಬುದು ಅದರ ಬೆಳವಣಿಗೆ. ಇವುಗಳ ಸಾತತ್ಯ ಕ್ಷಣಿಕವಾಗದೆ ಮುನ್ನುಗ್ಗಬೇಕು. ಬಯಸಿದ್ದು ಸಿಗದಾಗ ಅಗಲಿಕೆ ವಿರಹದ ತಾಪವಾಗುತ್ತದೆ. ಬೇಂದ್ರೆಯವರ ದೃಷ್ಟಿಯಲ್ಲಿ ವಿರಹ ಎರಡು ವಿಧವಾದ ಫಲವನ್ನು ಕೊಡಬಲ್ಲುದು. ಅದರ ಪರ್ಯವಸಾನ ದುಃಖದಲ್ಲಿಯೇ ಆಗಬಹುದು ಅಥವಾ ಭಾವಶುದ್ಧಿಯ ಮೂಲಕ ಅದು ಪ್ರೇಮದ ಸ್ಥಿತಿಯನ್ನು ತಲುಪಬಹುದು. ಅವರ ವಿರಹಗೀತೆಗಳಲ್ಲಿ ಈ ಎರಡು ಅವಸ್ಥೆಗಳನ್ನೂ ಕಾಣಬಹುದು.

ಪ್ರೇಮಿಗಳು ಹತ್ತಿರವಿದ್ದಾಗ ಮೈಮರೆವು ಉಂಟು ಮಾಡುವ ಶೃಂಗಾರ ಅವರು ಅಗಲಿದಾಗ ಅನಂತರೂಪ ತಾಳಿ ಅವರ ಮನಸ್ಸು ಪರಿಪಾಕಗೊಳ್ಳುವಂತೆ ಮಾಡುತ್ತದೆ. ಆ ಅಗಲಿಕೆಯ ನೋವು, ವಿರಹದ ತಾಪ ಬೇಂದ್ರೆಯವರ ಕಾವ್ಯಗಳಲ್ಲಿ 'ಒಲುಮೆಯ ಕಿಚ್ಚಾಗಿ' ಹಲವು ಭಾವಲಹರಿಯನ್ನು ತನ್ನ ಸಹೃದಯರಿಗೆ ನೀಡುತ್ತವೆ. ಒಂದಾಗಿದ್ದಾಗಿನ ರಸಭೋಗಕ್ಕಿಂತ ಬೇರೆಯಾಗಿರುವಾಗಿನ ರಸೈಕ್ಯದಾಸೆ ರಸರೂಪಿ ಸ್ಥಿತಿಯಾಗಿರುತ್ತದೆ. ಅಂತಹ ಸ್ಥಿತಿಯಲ್ಲಿನ ವಿರಹಿಗಳ ದಗ್ಧ ಹೃದಯದ ರಸಿಕ ಮನದ ಹಾಡು ಅವರ ಅನುಭವದ ಪಾಡಾಗಿ ರಸಿಕರು ಆನಂದಪಡುವ ಹಾಡಾಗಿವೆ. "ವಿರಹದ ಕಾವಿನಲ್ಲಿ ಪುಟಗೊಳ್ಳುವ ಸ್ನೇಹವೇ ಶುದ್ಧವಾದುದು"[೧೧] ಎಂದು ಬೇಂದ್ರೆಯವರೇ ನುಡಿದಿದ್ದಾರೆ. ಪ್ರೇಮಿಗಳು ಅನುಭವಿಸುವ ವಿರಹದಲ್ಲಿ ಪ್ರೇಮದ ಅನುಭವ ಶುದ್ಧ ಹಾಗೂ ಸತ್ಯವಾಗಿರಬೇಕು. ಆಗ ಮಾತ್ರ ಅದು ಶಕ್ತಿಯಾಗಿ ಅವನ ಪ್ರೇಮದ ನಿಷ್ಠೆ ಫಲ ನೀಡುವುದು. ಇಂತಹ ವಿರಹ ಕಾವ್ಯಗಳನ್ನು ಬೇಂದ್ರೆಯವರಲ್ಲಿ ಅಗಾಧವಾಗಿ ಕಾಣಬಹುದು. ವಿರಹದಲ್ಲಿ ವಿಕೃತ ಭಾವೋದ್ರೇಕಗೊಳ್ಳುವುದು ಉಂಟು. ಆದರೆ, ಅದು ತಮ್ಮ ಜೀವನವನ್ನೇ ಹಾಳು ಮಾಡುವುದಲ್ಲದೆ, ಸಮಾಜಕ್ಕೆ ಕಂಟಕವಾಗುತ್ತದೆ. ಅಂತಹ ವಿಕೃತ ವಿರಹಿಗಳನ್ನು ಬೇಂದ್ರೆಯವರು ಸುಸಂಸ್ಕೃತರಾಗುವಂತೆ, ತಮ್ಮ ಬೌದ್ಧಿಕ ಸ್ವಾಸ್ಥ್ಯವನ್ನು ಕಾಪಾಡಿಕೊಳ್ಳುವಂತೆ ಕರೆ ನೀಡುತ್ತಾರೆ. ಅವರ ವಿರಹ ಭಾವದ ಕವನಗಳೆಂದರೆ, 'ಒಲುಮೆಯ ಕಿಚ್ಚು',

'ನಗೀನವಿಲು', 'ಹೂಂ-ಊಂಹೂ', 'ಚಿತ್ರ', 'ನೀರಿಗೆ ನಡೆದಾಗ', 'ಹರಕೆ,' ' ನಾನೊಂದ ನೆನೆದರೆ', 'ರಾಧೆಯ ಪಾಡು', ಮುಂತಾದವುಗಳಾಗಿವೆ.

ಬೇಂದ್ರೆಯವರ 'ಸಖಿ! ಬಾರೆ ಬಾ! ಎಂಬ ಕವನದಲ್ಲಿ ಅನಾದಿ ಕಾಮದ ಕ್ರಮ ಜೀವಲೋಕದಲ್ಲಿ ಮಾನವರಲ್ಲಿ ಪ್ರವಹಿಸುತ್ತಿರುವುದು ಒಂದು ಸಹಜ ಆಕರ್ಷಣೆಯಾಗಿದೆ. ಅದಕ್ಕೊಳಗಾದ ಗಂಡು-ಹೆಣ್ಣಿಗಾಗಿ ಬಯಸಿ ಕೂಗುವ ಕೂಗು- ಒಳಗಿನ ಸಖ ಜೀವದ ಕೂಗೆಂದು ತಿಳಿಸಿದ್ದಾರೆ. (ಸಖೀಗೀತ ಕವನ ಸಂಕಲನ, ಪುಟ. 38)

"ಎಂದಿನಿಂದಲೋ ಏನೋ ಒಳಗೊಂದು ಸಖಜೀವ
ಸಖಿ! ಬಾರೆ ಬಾ! ಎಂದು ಕೂಗುತಿದೆ
'ಮುಂದಿನ ಪಥದಲಿ ಸಖಿಯಾಗು ಬಾ' ಎಂದು
ನನ್ನ ಮನೋರಥ ಕೂಗುತಿದೆ"

ಹೀಗೆ ಗಂಡು-ಹೆಣ್ಣು ಸೇರಿ ಅಗಲಿಕೆಯನ್ನು ಮರೆತು ಸಂಸಾರ ನಡೆಸುತ್ತಾರೆ. ಆದರೆ, ಮತ್ತೆ ಮತ್ತೆ ಇಂತಹ ಅಗಲಿಕೆಗಳು ನಡೆಯುತ್ತಲೇ ಇರುತ್ತವೆ. ಆ ಯೌವನದ ಅಗಲಿಕೆಯನ್ನು ಬೇಂದ್ರೆಯವರು 'ಮಾಗಿ ಕಾಲದ ಬನದ ರೀತಿಯಿದೆ' ಎಂದಿದ್ದಾರೆ. ಅದನ್ನು ಅವರ 'ಒಲುಮೆಯ ಕಿಚ್ಚು' ಕವನದಲ್ಲಿ ನೀಡುತ್ತಾ ವಿರಹಿಣಿಯೊಬ್ಬಳು ತನ್ನ ಮನದ ಕೋಗಿಲೆಗೆ ಸುಗ್ಗಿಯನ್ನು ಕರೆದು ತಾ ಎಂದು ಕೋರುತ್ತಿರುವುದನ್ನು ಚಿತ್ರಿಸಿದ್ದಾರೆ.

'ಮಾಗಿಯ ಮೂಡಲ ಗಾಳಿ ತಾಗಿದ ಬನದಾಂಗ
ಸಾಗ್ಯದ ನನ್ನ ಹರೆಯವು ಕೋಗಿಲಾ
ಕೂಗಿ ಕರೆತಾರ ಸುಗ್ಗಿಯಾ॰

ಹೀಗೆ ತ್ರಿಪದಿಯ ರೂಪದಲ್ಲಿ ಜಾನಪದ ಸೊಗಡಿನಲ್ಲಿ ಹೆಣ್ಣಿನ ವಿರಹವನ್ನು ಸಾಧಾರಣೀಕರಿಸಿದ್ದಾರೆ. ಇದೇ ಈ ಪದ್ಯದ ವೈಶಿಷ್ಟ್ಯವೂ ಸಹ ಆಗಿದೆ. ಈ ಅಗಲಿಕೆಯಲ್ಲಿ ಕಾಮ ತನ್ನ ಚಿರಂತನತೆಗೆ ಕಾವು ಕೊಟ್ಟು ಒಲವನ್ನು ಕಿಚ್ಚಾಗಿಸುತ್ತದೆ. ನಂತರ ಅವರ ಪರಿಶುದ್ಧ ಪ್ರೇಮಕ್ಕೆ ಆನಂದದ ಫಲ ಸಿಗುತ್ತದೆ. ಈ ರೀತಿ ಪ್ರಿಯೆ ತನ್ನ ಪ್ರಿಯನಿಗಾಗಿ ಜೀವ ಹಿಡಿದುಕೊಂಡು ಕಾಯುವ ರೀತಿ ನಂತರ ಆ ಪ್ರೀತಿಯ ಸವಿಯನುಣ್ಣುವುದು ಅವಳ ಹಾಗೂ ಅವನ ಅಗಲಿಕೆಗೆ ಸಿಕ್ಕ ಪ್ರತಿಫಲವಾಗಿದೆ. ಅದು ಬಾತುಕೋಳಿಯ ಹಾಗೆ ನಿಂತ ಕೆಟ್ಟ ನೀರಿನಲ್ಲಾಡುವುದಿಲ್ಲ. ಬದಲಿಗೆ ನಿಜ ಪ್ರೇಮದ ಮೀಸಲಳಿಯದ ಮಳೆಗಾಗಿ ಕಾಯುವ ವ್ರತರೂಪಿಯಾದುದು.

'ಬಾತುಕೋಳಿಯ ಹಾಂಗ ಚಾತಕದ ಜಾತ್ಯಲ್ಲ
ನಾತ ನೀರಾಗ ಅದರಾಟ, ಇದರೂಟ
ಮೀಸಲಳಿಯದ ಮಳಿಯಾಗ'

ಈ ಒಲುಮೆ ಎಂಬುದು ಕುಲುಮೆಯ ಕಿಚ್ಚಿನಂತೆ, ಈ ಕಿಚ್ಚಿನಲ್ಲಿ ಪ್ರಿಯೆಯ ಹುಲು ಜೀವ ಕಾಯುತ್ತಿದ್ದರೂ ಅವಳ ಒಳಜೀವ ನಿಜಪ್ರೀತಿಗಾಗಿ ಕಾದು ಬಾಳುತ್ತಿರುತ್ತದೆ.

'ಒಲುಮೆಯ ನಚ್ಚೊಂದು ಕುಲುಮೆಯ ಕಿಚ್ಚವ್ವ
ಹುಲುಜೀವ ಕಾದು ಕಮರೀತು ಒಳಜೀವ
ಒಲುಮಿಗೆ ಹ್ಯಾಂಗೋ ಬಾಳೀತು'

ಬೇಂದ್ರೆಯವರ 'ನಗೀ ನವಿಲು' ಕವನ "ಜೀವದೊಳಗಿನ ಜೀವಂತ ವಿರಹದ ಒಂದು ಪ್ರೇಮಗೀತೆ. ವಿರಹಿ ಕೋಕಿಲ, ಉಲ್ಲಾಸಿ ನವಿಲು" ಎಂಬ ಸಂದರ್ಭವನ್ನು ಹೊಂದಿದೆ. (ದ.ರಾ. ಬೇಂದ್ರೆ, ಗರಿ, ಪೂರ್ವೋಕ್ತ, ಪು. ೬೧) ವಿರಹ ಎಂಬುದು ಕೆಲವು ಕಾಲ ಇದ್ದು ಅದು ಮತ್ತೆ ಪ್ರೇಮವಾಗಿ ಪಲ್ಲವಿಸುತ್ತದೆ. ಆ ವಿರಹಕ್ಕೊಂದು ಅರ್ಥವಿದೆ. ಆದರೆ, ವಿರಹ ಜೀವಂತವಾಗಿ ವಿರಹವಾಗಿಯೇ ಉಳಿದಾಗ ಅಂತಹ ಪ್ರೇಮಗೀತೆಯನ್ನು ಕವಿಯೊಬ್ಬ ರಚಿಸುವುದು ಕಷ್ಟ. ಅದಕ್ಕೆ ಸಮರ್ಥ ಕವಿಯೇ ಆಗಬೇಕು. ಅಂತಹ ಅಪರೂಪದ ಕವಿತೆಯೇ ಬೇಂದ್ರೆಯವರ ಈ 'ನಗೀ ನವಿಲು' ಕವಿತೆ.

"ಮಿನಮಿನಮಿನ ಮಿಂಚತಿತ್ತ
ಮೂಡತಿತ್ತ ಮುಳಗತಿತ್ತ
ಮುಳುಗತಿತ್ತ ತೊಳಗತಿತ್ತ
ನೆಲಾ ಜಲಾ ಬೆಳಗತಿತ್ತ"

ಇಲ್ಲಿ ವಿರಹಿಣಿಯ ದೇಹವನ್ನು ಉಲ್ಲಾಸದಿಂದ ಕುಣಿಯುವ ನವಿಲಿಗೆ ಹೋಲಿಸಿದ್ದಾರೆ. ಅವಳ ತುಂಬು ಶರೀರ ನವಿಲಿನಂತಿದ್ದರೆ, ಅವಳ ಮನಸ್ಸು ಮೌನದ ಸಂಕೇತವಾದ ಕೋಗಿಲೆಯಾಗಿದೆ. ಅವಳ ಮುಖದಲ್ಲಿ ನಗೆಯ ನವಿಲಿನ ಆಟವಿದೆ. ಕುಣಿತವಿದೆ. ಅದು ಮುಗಿಲ ಕಡೆಗೆ ದೃಷ್ಟಿಯನ್ನು ಬೀರಿ 'ಮಳೆ'ಗೆ ಅಂದರೆ ನಲ್ಲನ ಬರುವಿಕೆಗೆ ಆಶಿಸುತ್ತ ಭರವಸೆಯ ನೋಟವನ್ನು ಹರಿಸಿದೆ.

'ನಾರೀ ನಿನ್ನ ಮಾರಿಮ್ಯಾಗ
ನಗೀ ನವಿಲು ಆಡುತ್ತ
ಆಡತಿತ್ತ ಓಡತಿತ್ತ
ಮುಗಿಲ ಕಡೆಗೆ ನೋಡತಿತ್ತ'

ಈ ಒಂದು ಕವಿತೆಯನ್ನು ಗಮನಿಸಿದರೆ, ಹೇಗೆ ಕ್ರೌಂಚ ಪಕ್ಷಿಯ ಮಿಥುನದ ವಿರಹವನ್ನು ಕಮಡು ವಾಲ್ಮೀಕಿ ರಾಮಾಯಣವನ್ನು ರಚಿಸಿದನೋ ಹಾಗೆ ಬೇಂದ್ರೆಯವರು ಈ 'ನಗೀ ನವಿಲು' ಕಾವ್ಯವನ್ನು ರಚಿಸಿದಂತಿದೆ.

'ಹೂ–ಊಂಹೂ' ಕವನ ದಾಂಪತ್ಯದ ಸುಖಸವಿದ ಅನಂತರದ ಒಂದು ವಿರಹ ಮನದ ಭಾವಲಹರಿಯಾಗಿದೆ. ಕಳೆದುಕೊಳ್ಳುವಿಕೆಯನ್ನೇ ಮುಖ್ಯ ವಸ್ತುವನ್ನಾಗಿಟ್ಟುಕೊಂಡ ಕವಿತೆಯಾಗಿದ್ದು, ಕೋಗಿಲೆಯ ಕೂಜನದೊಂದಿಗೆ ಪ್ರಾರಂಭವಾಗುತ್ತದೆ.

"ಕೂ ಹೂಽ ಕೂಹೂ ಽ ಕೂಹೂ ಽ
ಮೈತುಂಬ ಮಾವು ಹೂಽ ಹೂ ಽ
ಒಳಹೊರಗೂ ಹೂತೆವೇ ನಾವೂ
ನೀವೂಽ ಕೂಹೂ ಽ"

ಎಂದು ಕೇಳುವ ಕೋಗಿಲೆಯ ಇಂಚರ ಮತ್ತು ಅದು ಕುಳಿತು ಹಾಡುತ್ತಿರುವ ಮಾವಿನಮರ ಸುಖದ ಸಂಕೇತವಾಗಿದೆ. ಈ ಕವಿತೆಗೆ ದನಿಯಿತ್ತ ನಲ್ಲ ತಾನು ನಲ್ಲೆಗೆ 'ಮೈತುಂಬ ಮಾವು ಹೂ ಹೂ ' ಆಗಿ ತಾವು ಹೂ ಸುಗ್ಗಿಯನ್ನು ನೆನಪಿಸಿಕೊಡುತ್ತಾನೆ. ಅದು ಯೌವನದ ಪ್ರತಿ ತುತ್ತೂ ಮುತ್ತಾಗಿ ಮತ್ತು ಬರಿಸುತ್ತಿತ್ತು ಎಂದಿದೆ.

"ತುಟಿ ತುಟಿಗೆ ಮುತ್ತನೊತ್ತಿಽಽ
ಜೇನ್ನುಡಿಯ ಬೀಜಬಿತ್ತಿಽಽ
ಮಧುಚಂದ್ರನ ಸ್ವಪ್ನವನೆತ್ತಿಽ
ಸುಳಿದಾಡುತ್ತಿತ್ತು ಸುತ್ತೂಽ
ತುತ್ತೂ ತುತ್ತೂ ತುತ್ತು
ಬರಿ ಮುತ್ತೇ ಮತ್ತೇ ಮತ್ತೂ

ಕಾಲದ ಚಕ್ರಗತಿಗೆ ಸಿಕ್ಕು ದಾಂಪತ್ಯದಲ್ಲಿ ಕಷ್ಟ ಸುಳಿದಿದೆ. ವಿರಹ ಮೂಡಿದೆ. ಅದೇ ಗಂಡ ಹೆಂಡತಿಯಿದ್ದರೂ, ಅವರ ಬದುಕು ಕಹಿಯಾಗಿದೆ. ಅದರ ಅರಿವು ಅವರಿಗಿದೆ. ಅದು ಗೊತ್ತಿದ್ದೇ ಅವರು ನುಡಿಯುತ್ತಾರೆ;

"ಮಾವಾಯಿತು ಯಾವುದೊ ಬೇವು
ಅದೆ ಇದ್ದರು ನಾವೂ ನೀವೂ
ಬಾಳಾಗಿದೆ ಬದುಕಿನ ಸಾವು"

ಕೋಗಿಲೆಯ 'ಕುಹೂ' ಈಗ ಸುಗ್ಗಿಯ ಕರೆಯಾಗಿರದೆ ನೋವಿನ ಕೂಗಾಗಿದೆ ಕವಿತೆಯ ಕೊನೆಯಲ್ಲಿ ಹೀಗಿದೆ.

ಅಣಗಿಸುತಿವೆ ಒಣಗಿದ ಹೂವೂ
ಎಲ್ಲಿರುವುದು ಆಗಿನಹೂ ಹೂ
ಊಂಹೂ಼ ಊಂಹೂ಼ ಊಂಹೂ಼

ಈ ಪ್ರತಿಮೆಗಳು ಕಳೆದುಕೊಳ್ಳುವಿಕೆಯ ಕ್ರಿಯೆಗೆ ಅತ್ಯಂತ ಪ್ರಭಾವಿಯಾಗಿ ಅಂತಿಮತೆಯ ಸ್ವರೂಪವನ್ನು ಕೊಡುತ್ತದೆ.

ವಿರಹದ ಉತ್ಕಟತೆಯನ್ನು ಕುರಿತಂತೆ ಅನೇಕ ಕವಿತೆಗಳನ್ನು ಬೇಂದ್ರೆಯವರು ನೀಡಿದ್ದಾರೆ. 'ಹುಬ್ಬಳ್ಳಿಯಾಂವಾ', 'ಗಮ ಗಮಾ ಗಮಾಡಾಸ್ತಾವ ಮಲ್ಲಿಗಿ'ಗಳಿಂದ ಕವಿತೆಗಳು ಈ ಸಾಲಿಗೆ ಸೇರುತ್ತವೆ. ಲಾವಣಿ ಮಾದರಿಯಲ್ಲಿ ರಚಿತವಾಗಿರುವ 'ಹುಬ್ಬಳ್ಳಿಯಾಂವಾ' ಪದ್ಯದಲ್ಲಿ ಸೂಳೆಯೊಬ್ಬಳು ತನ್ನ ಪ್ರಿಯಕರನಿಗಾಗಿ ವಿರಹ ದುಃಖದಿಂದ ಹಂಬಲಿಸುವ ರೀತಿ ವ್ಯಕ್ತವಾಗಿದೆ.

ಇಲ್ಲಿ ನೆನೆಯುವುದೇ ದುಃಖದ ಮೂಲವಾಗಿದೆ. ಬೇಂದ್ರೆಯವರ ಅಲಿಖಿತ 'ಪಂಜು' ನಾಟಕದಲ್ಲಿ ಬರಬೇಕಾಗಿದ್ದ ಈ ಹಾಡಿನ ಭಾವ ಸಂದರ್ಭ ಪ್ರಣಯ ಭಂಗದಿಂದ ಹುಚ್ಚು ಹಿಡಿದ ಸೂಳೆಯೊಬ್ಬಳು ತನ್ನ ಉನ್ಮಾದದಲ್ಲಿ ಈ ಹಾಡನ್ನು ಹೇಳಿದಂತೆ ಕವಿ ಕಲ್ಪನೆ. ಈ ಪಾತ್ರದಲ್ಲಿ ಬರುವ ಸೂಳೆಯ ಸ್ನೇಹ, ಪ್ರೇಮ ಶುದ್ಧವಾದುದು. ಈ ಶುದ್ಧ ಸ್ನೇಹವನ್ನು ಗುರುತಿಸಿಯೇ ಕವಿ ಈ ಗೇಯಗೀತವನ್ನು ರಚಿಸಿದ್ದಾರೆ. ಅವಳಿಗೆ ಸನ್ಮಾರ್ಗದ ಪ್ರೇರಣೆಯನ್ನು ಕೊಡುತ್ತಾರೆ. 'ಇನ್ನೂ ಯಾಕ ಬರಲಿಲ್ಲವ್ವಾ ಹುಬ್ಬಳ್ಳಿಯಾವಾ' ಎಂಬ ಗುಂಗು ಹಿಡಿಸುವ ಪಲ್ಲವಿ ಮತ್ತು ನುಡಿಗಳಲ್ಲಿ ನಾಯಕಿಯ ವಿರಹ ದುಃಖ ಉಮ್ಮಳಿಸಿ ಬರುತ್ತಿದೆ.

"ಯಲ್ಲಿ! ಮಲ್ಲಿ! ಪಾರೀ! ತಾರೀ! ನೋಡೀರೆನವ್ವಾ?
ನಿಂಗಿ! ಸಂಗೀ! ಸಾಂವತರೀ! ಎಲ್ಹಾನ ನನ್ನಾಂವಾ?
ಸೆಟ್ಟರ ಹುಡುಗ ಸೆಟಗೊಂಡ್ಹೋದಾ ಅಂತ ನನ್ನ ಜೀವಾ
ಹಾದೀಬೀದೀ ಹುಡುಕತೈತ್ರೇ ಬಿಟ್ಟ ಎಲ್ಲ ಹ್ಯಾಂವಾ

ಈ ರೀತಿ ಕವಿತೆಯಲ್ಲಿ ಕೊನೆಯ ಸಾಲುಗಳು ನಾಯಕಿಯ ವಿರಹವು ದುಃಖ ಎಷ್ಟು ತೀವ್ರವಾದುದೆಂದು ತಿಳಿಯುತ್ತದೆ. ಆದರೂ, ಈ ಕವಿತೆಯಲ್ಲಿ ನಾಯಕನ ವರ್ಣನೆಗೆ ಹೆಚ್ಚಿನ ಮಹತ್ವ ನೀಡಿದಂತಿದೆ. ಅವನ ರೂಪ, ರಸಿಕತೆ, ಸೌಂದರ್ಯದೃಷ್ಟಿ, ಔದಾರ್ಯ, ಉಲ್ಲಾಸ, ಪ್ರಕೃತಿ, ಮಾತಿನ ಚತುರತೆ, ಹುಟ್ಟು ಮೋಹಕ ಗುಣ ಇವೆಲ್ಲವನ್ನೂ ಮರೆಯಲಾರದೆ ನಾಯಕಿ ನೆನೆಸಿಕೊಂಡು ಈ ರೀತಿ ಮನಸೋತಿದ್ದಾಳೆ. ಇವುಗಳೆಲ್ಲಾ ಅವಳನ್ನು ಕಾಡುತ್ತಾ ಲೈಂಗಿಕ

ಆಕರ್ಷಣೆಯನ್ನು ಮೀರಿದ ಒಂದು ಅನುಭವಸ ನಾಯಕನ ಸಹವಾಸದಿಂದ ಈಕೆ ಪಡೆದಿದ್ದಾಳೆ. ಇಲ್ಲಿ ನಾಯಕಿಯ ಮುಗ್ಧತೆ, ಅವಳು ಅವನ ಮೇಲೆ ತೋರುವ ನಿಶ್ಕಲ್ಮಷ ಪ್ರೀತಿ, ಹಾಗೂ ಪುನರ್ಜನ್ಮದಲ್ಲಾದರೂ ತಾವಿಬ್ಬರೂ ದಾಂಪತ್ಯವನ್ನು ಬಯಸಿರುವುದು ವ್ಯಕ್ತವಾಗುತ್ತದೆ. ಇವೆಲ್ಲಾ ಸಾಂಕೇತಿಕ ಧ್ವನಿಯ ರೂಪದಲ್ಲಿ ಮೂಡಿ ಬಂದಿವೆ.

ವಿರಹದ ಉತ್ಕಟತೆಯನ್ನು ವಸ್ತುವಾಗಿಟ್ಟುಕೊಂಡು ರಚಿತವಾದ ಇನ್ನೊಂದು ಕವಿತೆ ಸಖೀಗೀತದಲ್ಲಿ ಬರುವ 'ರಾಧೆಯ ಪಾಡು' (ಸಖೀಗೀತ, ಪು. ೮೨-೮೩) ಇದು ಸಹ ನಾಟಕದ ಅಂಗವಾಗಿಯೇ ರಚಿತವಾದದ್ದು. ಈ ಕವಿತೆಯಲ್ಲಿ ರಾಧೆ, ಅವಳ ಸಖಿ, ಮತ್ತು ಕೃಷ್ಣ ಈ ಮೂರು ಪಾತ್ರಗಳನ್ನು ರಚಿಸುವುದರ ಮೂಲಕ ನಾಟಕೀಯತೆಯನ್ನು ತಂದು ಕೊಟ್ಟಿದ್ದಾರೆ. ಇಲ್ಲಿ ರಾಧೆಯ ವಿರಹದ ದುಃಖವನ್ನು ಕೃಷ್ಣನು ಪರಿಹರಿಸುವ ರೀತಿ ಇದೆ. ಈ ಕವಿತೆಯಲ್ಲಿ ರಾಧೆಯ ಧ್ವನಿ ಮುಖ್ಯವಾಗಿ ಕೇಳಿಬರುತ್ತದೆ.

"ಹೊಳೆಯಾಳು ಹೊತ್ತಾರೆ
ಧುಮುಕಿ ನಾ ಸತ್ತಾರೆ
ಹೊಂದೇನೆ? ಅವನ ಹೊಂದೇನೇ"

ಈ ರೀತಿ ಪ್ರಾರಂಭವಾಗುವ ಅವಳ ಮಾತಿನಲ್ಲಿ ಕೃಷ್ಣನನ್ನು ಎಷ್ಟು ಕಾತುರದಿಂದ ಕಾಯುತ್ತಿದ್ದಾಳೆ ಎಂಬುದು ತಿಳಿಯುತ್ತದೆ. ಮುಂದೆ ಅವಳ ಈ ಪ್ರಶ್ನೆಗೆ ಕೃಷ್ಣ ಈ ರೀತಿ ನುಡಿಯುತ್ತಾನೆ.

'ನಾನೆಲ್ಲಿ ಹೋಗಿದ್ದೆ
ನಿನ್ನ ಎದೆಯೊಳಗಿದ್ದೆ'

ಈ ರೀತಿ ಕೃಷ್ಣ ಕೊಡುವ ವಿವರಣೆ ಕವಿತೆಗೆ ಅತ್ಯಂತ ನಾಟ್ಯಮಯವಾದ ತಿರುವು ನೀಡಿದೆ. ಜೊತೆಗೆ ರಾಧೆಯ ಪಾಡಿಗೆ ಅರಿವಿನ ಪರಿಹಾರವನ್ನು ಸೂಚಿಸುತ್ತದೆ. ಈ ಕವಿತೆಯನ್ನು ಬೇಂದ್ರೆಯವರು ಅವರ 'ಕಲ್ಯಾಣದ ಕಲ್ಯಾಣಿ' ಎಂಬ ಅಲಿಖಿತ ನಾಟಕವೊಂದಕ್ಕೆ ಬರೆದುದಾಗಿದೆ.

ಬೇಂದ್ರೆಯವರ ವಿರಹಗೀತೆಗಳಲ್ಲಿಯೇ ಅತ್ಯುತ್ತಮ ಎಂದು ಕರೆಯಬಹುದಾದ 'ಮರೆಯುವೆಯೋ, ಅರಿಯುವೆಯೋ' ಮತ್ತು 'ಎಲ್ಲಿರುವೆ ರಾಜಗಂಭೀರ' (ನಾದಲೀಲೆ ಪುಟ ೫೧-೫೨) ಕವಿತೆಗಳೂ ಸಹ ನಾಟ್ಯಗೀತೆಗಳೇ. ಈ ಹಾಡುಗಳೆರಡರಲ್ಲೂ ಪ್ರಶ್ನೆಗಳಿವೆ. ಮೊದಲ ಗೀತೆಯಲ್ಲಿ 'ಮರೆಯುವಿಯೋ?', 'ಅರಿಯುವೆಯೋ?', ಬೆರೆಯುವಿಯೋ?' ಎಂಬ ಪ್ರಶ್ನೆಗಳು ಅರಮನೆಯ ಹೆಣ್ಣುಗಳು ಮತ್ತು ರಾಜನ ಸಂಬಂಧದ ಸಾಧ್ಯತೆಗಳನ್ನು ಕುರಿತಾದ

ಪ್ರಶ್ನೆಗಳಾಗಿವೆ. ನಂತರದ ಗೀತೆಯಲ್ಲಿ 'ಎಲ್ಲಿರುವೆ?' ಎಂಬ ಪ್ರಶ್ನೆ ನಿಜವಾದ ಪ್ರಶ್ನೆಯಾಗಿರದೆ ಆರ್ತತೆಯ ಮೊರೆಯಾಗಿದೆ.

"ಹೃದಯ ಪಂಜರದಲ್ಲಿ ಗಿಳಿಯಾದೆವೆಂದೆವು
ಮಧುರ ಮೋಹನ ತೇಜಾ ರಾಜಾ
ನವರತ್ನಸಾರದ
ಭವದ ಕಾಂತಾರದಿ
ತೊರೆಯುವಿಯೋ ನಮ್ಮನ್ನಾ"

ರಾಜನ ಜೊತೆಗೂಡಿರುವ ಆ ಹೆಂಗಳೆಯರಿಗೆ ಆತನೇ 'ಮಧುರ ಮೋಹನ ತೇಜ' 'ಮದನ ಸುಂದರ ರೂಪ ಕುಮಾರ'ನಾದ ಆತ ತನ್ನ ಸತಿಯ ಮೇಲಿನ ಒಲವು ಹೆಚ್ಚಾಗಿ ಅವಳೊಡನಿರುವಾಗ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡ ಈ ಹೆಂಗಳೆಯರಿಗೆ ತಮ್ಮ ಭವಿತವ್ಯದ ಬಗ್ಗೆ ಆತಂಕ ಉಂಟಾಗಿದೆ. ಈ ಮೇಲಿನ ಪದ್ಯದ ರೀತಿ ಅವರು ಆತಂಕವನ್ನು ತೋಡಿಕೊಳ್ಳುತ್ತಾರೆ. ರಾಜನ ಒಲುಮೆಯ ಉಸಿರಿಲ್ಲದೆ ತಾವು ಕೇವಲ ನಿರ್ಜೀವ ಗೊಂಬೆಗಳು ಎಂಬ ಭಾವನೆ ಅವರಲ್ಲಿ ಬೇರೂರಿವೆ.

ಹೀಗೆ ಬೇಂದ್ರೆಯವರ ಪ್ರೇಮ ಮೀಮಾಂಸೆಯಲ್ಲಿ ವಿರಹಕ್ಕೆ ವಿಶಿಷ್ಟ ಸ್ಥಾನವಿರುವುದನ್ನು ಈಗಾಗಲೇ ನೋಡಿದ್ದೇವೆ. ಅದರಲ್ಲೂ ಕಾಳಿದಾಸ ವಿರಚಿತ 'ಮೇಘಧೂತ' ಕಾವ್ಯವು ಬೇಂದ್ರೆಯವರ ದೃಷ್ಟಿಯಲ್ಲಿ ಮಹತ್ತರವಾದುದಾಗಿದೆ. ಅದಕ್ಕೆ ಕಾರಣ, ಅದರಲ್ಲಿರುವ ಕಾಮ–ಪ್ರೇಮದ ದರ್ಶನದಲ್ಲಿರುವ ಸಾಂಕೇತಿಕತೆ. ಈ ಸಾಂಕೇತಿಕತೆಯನ್ನು ಇವರು ಸಮರ್ಥವಾಗಿ ವ್ಯಾಖ್ಯಾನಿಸಿದ್ದಾರೆ. ಕಾಳಿದಾಸನ 'ಮೇಘದೂತ' ಬೇಂದ್ರೆಯವರ ಮನೋಧರ್ಮಕ್ಕೆ ತುಂಬಾ ಹತ್ತಿರವಾಗಿದ್ದು ಕನ್ನಡದಲ್ಲಿ ಅದನ್ನು ಅನುವಾದ ಮಾಡಲು ಕಾರಣವಾಯಿತು. ವಿರಹದಿಂದ ಪ್ರೇಮದ ಕಾಮದ ತೀವ್ರತೆಯನ್ನು ಕಳೆದುಕೊಂಡು ಪರಿಶುದ್ಧವಾಗುವ ಶುದ್ಧ ಪ್ರೇಮತ್ವ ಇದರಲ್ಲಿದೆ.

"ಕಾಮ–ಪ್ರೇಮ ಕೆಸರು–ಕಮಲ ಇದ್ದಂತೆ' ಎಂದು ಹೇಳಿ ಅವೆರಡೆರ ಉಗಮ ಉದ್ಭವಗಳ ಸಂಬಂಧವನ್ನು ಬೇಂದ್ರೆಯವರು ಅರ್ಥವಾಗಿ ಸೂಚಿಸಿದ್ದಾರೆ. ಕಾವ್ಯ ಧರ್ಮ ಕಾಮವಾಗಲೆತ್ನಿಸುವ ಕಾಮಧರ್ಮ ಎಂಬ ಅವರ ಹೇಳಿಕೆಯ ಆಶಯವೂ ಕೂಡ ಇದೇ ಆಗಿದೆ. ಅವರ ಅನೇಕ ಮಹತ್ವದ ಕವಿತೆಗಳಲ್ಲಿ ಕಾಮವನ್ನು ಪ್ರೇಮವನ್ನಾಗಿ ಪರಿವರ್ತಿಸುವ ಕ್ರಿಯೆ ನಡೆಯುತ್ತದೆ. ಈ ಕ್ರಿಯೆಯಲ್ಲಿ ಅವರ ಕಾವ್ಯ ನಾಯಕರು ಅನುಭವಿಸುವ ಸೋಲು–ಗೆಲುವುಗಳು ಬೇಂದ್ರೆಯವರ ದರ್ಶನದಲ್ಲಿ ಮಹತ್ವದ ಸಾಂಕೇತಿಕತೆಯನ್ನು ಪಡೆಯುತ್ತದೆ".[೧೨]

ಕಾಮತತ್ವಕ್ಕೆ ಒಂದು ಸನಾತನ ದಾರ್ಶನಿಕ ಪರಂಪರೆ ಇರುವುದು ಮೇಘದೂತದ ಪೀಠಿಕಾ ಪದ್ಯಗಳಲ್ಲಿ ವಿವರಿಸಿದ್ದಾರೆ. “ಕಾಮ ವ್ಯಕ್ತಿಯೇ ಭಾವವೇ, ತತ್ವವೇ, ಪುರುಷಾರ್ಥವೇ ಎಂಬ ಚಿಂತನೆಗೆ ಅಂಬಿಕಾತನಯದತ್ತರು ತೊಡಗಿದಂತಿದೆ. ಕಾಯಜ, ಭಾವಜ, ಮನೋಜ, ಎಂಬ ನಾಮಗಳಿಂದ ‘ಕಾಮ’ ಒಬ್ಬ ವ್ಯಕ್ತಿ ಎಂದು ತೋರುವಂತಿದೆ. ಆದರೆ, ಅವನು ಅನಂಗ ಎಂಬುದನ್ನು ನೆನೆಸಿದಾಗ,; ‘ಕಾಮ’ ಒಂದು ಭಾವವಿರಬೇಕು. ತತ್ವ ಇರಬೇಕು ಎಂದು ಒಪ್ಪಿಗೆಯಾಗುತ್ತದೆ. ಈ ಭಾವ ಹಬ್ಬಿದೆ, ಬಿಡಿಸಲು ಬಾರದ ಪ್ರಶ್ನೆಯಾಗಿದೆ ಎಂಬುದು ಇತಿಹಾಸ ‘ಕಾಮ’ ಪ್ರಶ್ನೆಯನ್ನು ಬಿಡಿಸುವುದೇ ಒಂದು ಪುರುಷಾರ್ಥ ಅಲ್ಲವೇ?”[೧೩] ಬೇಂದ್ರೆಯವರಿಗೆ ಕಾಮ–ವಿರಹ–ಪ್ರೇಮಗಳ ಸಂಬಂಧದ ಮೂಲ ಕಲ್ಪನೆ ಕಾಳಿದಾಸನಿಂದಲೇ ದೊರೆತಿರಬಹುದು. ತಮ್ಮ ಎಲ್ಲ ಕೃತಿಗಳಲ್ಲಿ ‘ಮೇಘದೂತ’ ತಮ್ಮ ಮೇಲೆ ಹೆಚ್ಚು ಪ್ರಭಾವ ಬೀರಿದ ಕೃತಿ ಎಂದು ಅವರೆ ಒಪ್ಪಿಕೊಂಡಿದ್ದಾರೆ.

‘ಜಗದ ತಂದೆ–ತಾಯಿಯರ ಕಂದ ಅವತರಿಸೆ ಜೀವವಾಗಿ
ಬಂತು ಪೂರ್ವದಲಿ, ದೇವಕಾಮವೇ ಕಾಮದೇವವಾಗಿ’॥

(ಮೇಘದೂತ, ಪುಟ ೧)

ಈ ಮೇಲಿನ ಸಾಲುಗಳಲ್ಲಿ ಕಾಮವು ಪ್ರೇಮವಾಗಿ, ಭಕ್ತಿಯ ಉದಾತ್ತ ಸ್ಥಾನಕ್ಕೇರಿರುವುದನ್ನು ಕಾಣುತ್ತೇವೆ.

ಈ ಅಧ್ಯಾಯದ ಕೊನೆಯದಾಗಿ ಒಂದು ಮಾತನ್ನು ಸ್ಪಷ್ಟಪಡಿಸಬೇಕಾಗುತ್ತದೆ. ಬೇಂದ್ರೆಯವರ ಕವನಗಳನ್ನು ಏಕಮುಖ ದರ್ಶನದಿಂದ ಕೇವಲ ಪದಗಳಲ್ಲಿ ಕಟ್ಟಿಡುವುದು ತುಂಬಾ ಕಷ್ಟ. ಏಕೆಂದರೆ, ಅವರ ಕಾವ್ಯಗಳಲ್ಲಿ ಅನುಭಾವ ಪ್ರಮುಖವಾದುದು. ಅವರ ಅನುಭಾವವನ್ನು ಅರಿಯಲು ಕವಿ–ಸಹೃದಯರ ಸಹಯೋಗವಾದಾಗ ಮಾತ್ರ ಸಾಧ್ಯವಾಗುತ್ತದೆ. ಇಂತಹ ಅನುಭಾವವನ್ನು ಅವರ ಕಾವ್ಯಗಳಲ್ಲಿ ಹಿಡಿದಿಡುವ ಒಂದು ಪುಟ್ಟ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

## ಅಡಿಟಿಪ್ಪಣಿಗಳು

೧. ಒಲವೇ ನಮ್ಮ ಬದುಕು, ಅಂಬಿಕಾತನಯದತ್ತ, ಪ್ರ: ವಿಶ್ವ ಕನ್ನಡ ಸಮ್ಮೇಳನ, ಪೀಠಿಕೆ–೧, ಬನ್ನಂಜೆ ಗೋವಿಂದಾಚಾರ್ಯ

೨. ಸಾಹಿತ್ಯದ ವಿರಾಟ್ ಸ್ವರೂಪ, ದ.ರಾ.ಬೇಂದ್ರೆ, ಸಮಾಜ ಪುಸ್ತಕಾಲಯ, ಧಾರವಾಡ, ೧೯೭೪. ಪು. ೧೪೨.

೩. ಮಾತೆಲ್ಲ ಜ್ಯೋತಿ, ದ.ರಾ.ಬೇಂದ್ರೆ, ಪೂರ್ವೋಕ್ತ. ಪು. ೭೧.

೪. ಸಖೀಗೀತ, ಮುನ್ನುಡಿ iii, iv, ದ.ರಾ. ಬೇಂದ್ರೆ, ಸಂ. ಡಾ. ವಾಮನಬೇಂದ್ರೆ, ೧೯೭೪, ಹನ್ನೆರಡನೆಯ ಮುದ್ರಣ.

೫. ಭುವನದ ಭಾಗ್ಯ, ಜಿ.ಎಸ್.ಆಮೂರ, ೨೦೦೮, ಪ್ರಿಯದರ್ಶಿನಿ ಪ್ರಕಾಶನ. ಪು.ಸಂ. ೧೨೭೪, ಹನ್ನೆರಡನೆಯ ಮುದ್ರಣ.

೬. ಭುವನದ ಭಾಗ್ಯ, ಜಿ.ಎಸ್.ಆಮೂರ, ಸಖೀಗೀತ, ಸ್ನೇಹ ಪ್ರಕಾಶನ, ೧೯೯೧, ಪು. ೧೩೧.

೭. ಗರಿ, ದ.ರಾ. ಬೇಂದ್ರೆ, ಪೂರ್ವೋಕ್ತ, ಪುಟ. ೧೨೨.

೮. ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ ಒಂದು ಅಧ್ಯಯನ ಡಾ. ಜಿ. ಕೃಷ್ಣಪ್ಪ, ಕಾಮಧೇನು ಪುಸ್ತಕ ಭವನ, ಪುಟ. ೧೩೫.

೯. ಸಾಹಿತ್ಯ ವಿಮರ್ಶೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, 'ಸಖೀಗೀತ'ದ ವಸ್ತು, ಎಲ್.ಎಸ್.ಶೇಷಗಿರಿರಾವ್, ೧೯೮೭, ಪುಟ. ೭೮.

೧೦. ದ.ರಾ.ಬೇಂದ್ರೆ, ಮೂರ್ತಿ ಮತ್ತು ಕಸ್ತುರಿ, ಪ್ರತಿಭಾ ಮುದ್ರಣ, ೧೯೫೫, ಪು. ೩೫.

೧೧. ಮಾತೆಲ್ಲ ಜ್ಯೋತಿ, ದ.ರಾ. ಬೆಂದ್ರೆ, ಪೂರ್ವೋಕ್ತ, ಪುಟ. ೩೮.

೧೨. ಭುವನದ ಭಾಗ್ಯ, ಜಿ. ಎಸ್. ಆಮೂರ. ಪ್ರಿಯದರ್ಶಿನಿ ಪ್ರಕಾಶನ ಪುಟ, ೧೨೩.

೧೩. ಔದುಂಬರ ಗಾಥೆ, 'ಕನ್ನಡ ಮೇಘದೂತದ ಮಹೋನ್ನತಿ', ಸಂ. ವಾಮನ ಬೇಂದ್ರೆ, ಪುಟ, ೨೪೦.

*****

# ಅಧ್ಯಾಯ – ೫

# ಬೇಂದ್ರೆ ಕಾವ್ಯದಲ್ಲಿನ ಭಾಷೆ, ತಂತ್ರ ಮತ್ತು ವೈಶಿಷ್ಟ್ಯತೆ

"ಹುಟ್ಟು ಋಷಿಯಲ್ಲದವನ ಕಬ್ಬ ಹಬ್ಬವೆ ಜಗಕೆ" ಎಂಬಂತೆ ಕವಿಯಾಗಲೆಂದೆ ಹುಟ್ಟಿ ಬಂದ ಕಾವ್ಯರ್ಷಿ ಬೇಂದ್ರೆಯವರು ಕನ್ನಡ ಸಾಹಿತ್ಯ ಪರಂಪರೆಗೆ ಕೊಟ್ಟ ಕಾಣಿಕೆ ಅಮೋಘವಾದುದು. "ಕಣ್ಣೆರೆಡು ಕಾಣಿಕೆ ಎರಡೆ?" ಎಂಬುದು ನಾಣ್ಣುಡಿ. ಆದರೆ, ಬೇಂದ್ರೆ ಕಾವ್ಯಗಳಲ್ಲಿ ಎರಡು ಕಣ್ಣುಗಳಿಂದ ಕಾಣುವ ಒಂದು ಕಾಣ್ಕೆ ಅಲ್ಲ. ಮೂರನೇ ಕಣ್ಣಿನಿಂದ ಕಂಡ ಕಾಣ್ಕೆಯೂ ಹೌದು. ಕಾವ್ಯವನ್ನು ಕುರಿತು ಬೇಂದ್ರೆಯವರು ಬರೆದಿರುವ ಕವನಗಳು ಕಾವ್ಯ ಮೀಮಾಂಸೆಗೆ ಹೊಸ ಆಯಾಮವನ್ನೇ ಮೂಡಿಸುವಂತಿವೆ. ಇಷ್ಟಾಗಿಯೂ ಬೇಂದ್ರೆಯವರೇನು ಬೆಳ್ಳಿ ಚಮಚವನ್ನು ಬಾಯಲ್ಲಿರಿಸಿಕೊಂಡು ಹುಟ್ಟಿಬಂದವರಲ್ಲ. ಕಷ್ಟ ಕಾರ್ಪಣ್ಯ, ನೋವು–ನಿಟ್ಟುಸಿರುಗಳ ನಡುವೆಯೇ ಅರಳಿದ ಬದುಕು ಅವರದು. ಆದರೂ, "ಬಡತನ–ಸಿರಿತನ ಕಡೆತನಕ ಉಳಿದಾವೇನ?" ಎನ್ನುವ ಮನೋಧರ್ಮದೊಂದಿಗೆ, ತಮ್ಮ ಬದುಕಿನ ವ್ಯಥೆಯನ್ನು ನುಂಗಿಕೊಂಡು ತಮ್ಮ ಚೈತನ್ಯದ ಅಮೃತಧಾರೆಯನ್ನೇ ವರ್ಷಿಸಿದರು.

"ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೆ
ನೀಡುವೆನು ರಸಿಕ ನಿನಗೆ;
ಕಲ್ಲು ಸಕ್ಕರೆಯಂಥ ನಿನ್ನೆದೆಯು ಕರಗಿದರೆ
ಅದರ ಸವಿಯನ್ನಷ್ಟೆ ಹಣಿಸು ನನಗೆ"

ಎಂಬ ಆದರ್ಶವನ್ನು ಮೆರೆದ ಬೇಂದ್ರೆಯವರು ಚಿಕ್ಕ ವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡು, ತಾರುಣ್ಯದಲ್ಲಿ ತಾಯಿಯನ್ನು ಕಳೆದುಕೊಂಡು, ಹುಟ್ಟಿದ ಒಂಭತ್ತು ಮಕ್ಕಳಲ್ಲಿ ಆರು ಮಕ್ಕಳು ಕಣ್ಮುಂದೆಯೇ ಇಲ್ಲವಾದ ದುಃಖವನ್ನೂ ಸಹಿಸಿಕೊಂಡು 'ಈಸಬೇಕು, ಇದ್ದು ಜೈಸಬೇಕು' ಎಂಬುದನ್ನು ವಸ್ತುತಃ ಬಾಳಿ ತೋರಿದವರು. ಹೀಗೆ ಜೀವನದುದ್ದಕ್ಕೂ ನೋವನ್ನುಂಡು ಬದುಕಿದ ಬೇಂದ್ರೆ ಅವರು ತಮ್ಮ ಕವನಗಳ ಮೂಲಕ ಮನಸೆಳೆದವರು. ಕನ್ನಡಿಗರನ್ನು ನಿಜವಾಗಿಯೂ ಭಾವಲೋಕದ ರಸಯಾತ್ರೆಗೆ ಕೊಂಡೊಯ್ದ ಕವಿ. ತಮ್ಮ ಕವನಗಳು ಕಣ್ಮುಂದೆ ಕಟ್ಟಿ ನಿಲ್ಲುವಂತೆ ಸಹೃದಯರನ್ನು ವಾಚನದ ಮೋಡಿಗೆ ಒಳಗಾಗುವಂತೆ ಮಾಡುತ್ತಿದ್ದ ಮಹಾ ಮಾಂತ್ರಿಕ. ಅವರ ಕಾವ್ಯಗಳಲ್ಲಿ ಕಾಣಬರುವ ವಸ್ತು ವಿಷಯ, ಭಾಷೆಯ ವೈಶಿಷ್ಟ್ಯತೆ ಹಾಗೂ ನಿರೂಪಣೆಯ ತಂತ್ರಗಾರಿಕೆ ಬೆರಗುಗೊಳಿಸುವಂಥದ್ದು.

ಸಾಮಾನ್ಯವಾಗಿ ಕವಿತೆಗಳಲ್ಲಿ ಭಾಷೆಯನ್ನು ಒಂದು ಸೂತ್ರಕ್ಕೆ ಅನುಸಾರವಾಗಿ ಪ್ರಯೋಗಿಸಿದಂತೆ ಭಾಸವಾದರೂ ಸಮರ್ಥ ಕವಿಯೊಬ್ಬ ಅದರ ಗಡಿಗಳನ್ನು ದಾಟಲೂ

ಪ್ರಯೋಗಿಸುತ್ತಿರುತ್ತಾರೆ. ಅದರ ವಿಧಾನ ಅನೇಕ ಬಾರಿ ವಿವರಣೆಗೆ ನಿಲುಕದಂತಿರುತ್ತದೆ. ಭಾಷೆಯನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡು, ಪದಗಳೊಂದಿಗೆ ಆಟವಾಡಿ, ಅವುಗಳನ್ನು ತಮಗೆ ಬೇಕಾದಂತೆ ಮಾರ್ಪಡಿಸಿಕೊಂಡ ಬೇಂದ್ರೆಯವರ ಕಾವ್ಯಗಳಲ್ಲಂತೂ ಇಂತಹ ಪ್ರಯೋಗಗಳು ಅಧಿಕ ಪ್ರಮಾಣದಲ್ಲಿ ನಡೆದಿವೆ. ಶಿಷ್ಟ ಕನ್ನಡದಲ್ಲೂ ಹಲವು ಕವಿತೆಗಳನ್ನು ಬರೆದಿರುವ ಬೇಂದ್ರೆಯವರ ಕಾವ್ಯಭಾಷೆಯ ವೈಶಿಷ್ಟ್ಯ ಎದ್ದು ಕಾಣುವುದು ಅವರ ಉತ್ತರ ಕರ್ನಾಟಕದ ಜನಪದ ಭಾಷೆಯನ್ನು ಬಳಸಿಕೊಂಡಿರುವ ರೀತಿಯಲ್ಲಿ. ಹೊಸಗನ್ನಡ ಕಾವ್ಯಕ್ಕೆ ಸಿದ್ಧಭಾಷೆಯೊಂದು ಇನ್ನೂ ರೂಪುಗೊಂಡಿರದ ಸಂದರ್ಭದಲ್ಲಿ ಭಾಷೆಯ ಮಡಿವಂತಿಕೆಯನ್ನು ಧಿಕ್ಕರಿಸಿ ಆಡುನುಡಿಯನ್ನು ಕಾವ್ಯಕ್ಕೆ ಒಗ್ಗಿಸಿಕೊಳ್ಳುವ ನಿರ್ಧಾರ ಹಾಗೂ ಅದರಲ್ಲಿ ಅದ್ಭುತ ಯಶಸ್ಸನ್ನು ಪಡೆದ ರೀತಿ ಕನ್ನಡ ಸಾಹಿತ್ಯದ ದೃಷ್ಟಿಯಿಂದ ಒಂದು ಐತಿಹಾಸಿಕ ಮಹತ್ವದ ಸಂಗತಿಯಾಗಿದೆ.

ರತ್ನಾಕರವರ್ಣಿ, ಲಕ್ಷ್ಮೀಶ, ಸರ್ವಜ್ಞ, ಪುರಂದರದಾಸ, ಶಿಶುನಾಳ ಷರೀಫ ಮುಂತಾದ ಭಕ್ತಿನೆಲೆಯ ದೇಸೀ ಕವಿಗಳಿಂದ ಕನ್ನಡ ಕಾವ್ಯ ಪರಂಪರೆಯ ಅನೇಕ ಅಂಶಗಳನ್ನು ಸ್ವೀಕರಿಸಿದ ಬೇಂದ್ರೆ ಅವರು ಭಾಷೆಯ ಲಯಗಳನ್ನರಗಿಸಿಕೊಂಡು ಮಾರ್ಗ–ದೇಸಿಗಳ ಒಡಂಬಡಿಕೆಯನ್ನು ಸಹಜವಾಗಿ ಸಾಧಿಸಿದರು. ಸಾಂಸ್ಕೃತಿಕ ಪರಂಪರೆಗೆ ಒಂದು ಹೊಸ ದಿಕ್ಕನ್ನು ತೋರಿದರೂ ಭಾಷೆಯ ಶಿಷ್ಟ ರೂಪ, ಆಡುಮಾತು, ಗ್ರಾಮ್ಯ ರೂಪಗಳಲ್ಲಿ ಕವಿ ಮಾಡಿಕೊಳ್ಳುವ ಆಯ್ಕೆ ಅಥವಾ ಅವೆಲ್ಲವುಗಳ ಸಂಯೋಜನೆಯಿಂದ ಕವಿ ರೂಢಿಸಿಕೊಳ್ಳುವ ಶೈಲಿ ಅವರ ಕಾವ್ಯದ ವೈಶಿಷ್ಟ್ಯವನ್ನು ಗುರುತಿಸುತ್ತದೆ. ಒಂದೇ ಕವಿತೆಯಲ್ಲಿ ಭಾಷೆಯನ್ನು ಬೇರೆ ಬೇರೆ ಸ್ತರಗಳಲ್ಲಿ ದುಡಿಸಿಕೊಳ್ಳುವುದು ಬೇಂದ್ರೆ ಕಾವ್ಯದ ವೈಶಿಷ್ಟ್ಯ. ಬೇಂದ್ರೆಯವರು ಆಡುಭಾಷೆಯಲ್ಲೇ ಹೊಸ ಕಾವ್ಯಗಳನ್ನು ರಚಿಸುವುದು ಅವರ ಕಾವ್ಯ ಪ್ರಜ್ಞೆಯನ್ನು ವೈಭವೀಕರಿಸುತ್ತದೆ. ಸಾಮಾನ್ಯವಾಗಿ ಅವರ ಕಾವ್ಯಗಳು ಶಬ್ದ, ಛಂದಸ್ಸು, ನಾದ, ಧ್ವನಿ ಈ ನಾಲ್ಕು ಅಂಶಗಳಿಂದ ಕೂಡಿದ್ದು, ಸ್ವತಂತ್ರವಾಗಿ ರಚನೆಗೊಂಡಂತಹ ಭಾವಗೀತೆಗಳಾಗಿವೆ. ಈ ಕಾವ್ಯಗಳು ಅವರ ಕೌಶಲ್ಯತೆಯನ್ನು ಸಾಧಿಸುವುದಲ್ಲದೆ, ಅದರಲ್ಲಿ ತಮ್ಮ ವೈಯಕ್ತಿಕತೆಯನ್ನು ಅನನ್ಯವಾಗಿ ಉಳಿಸಿಕೊಂಡಿರುವುದು ಸಾಬೀತಾಗಿದೆ.

ಕಾವ್ಯ ಭಾಷೆಗೆ ವೈವಿಧ್ಯವನ್ನು ತರಲು ಬೇಂದ್ರೆ ಅವರು ಸಮಕಾಲೀಕವಾದ ಪ್ರಾದೇಶಿಕ ಪ್ರಭೇದಗಳನ್ನು ಉಪಯೋಗಿಸುತ್ತಾರೆ. ಪ್ರಾದೇಶಿಕ ಪ್ರಭೇದ ಎನ್ನುವಾಗ ಜನಪದರ ಭಾಷೆ ಮತ್ತು ಜಾನಪದ ಭಾಷೆಗಳ ನಡುವೆ ಇರುವ ಅಂತರವನ್ನು ಸ್ಪಷ್ಟಪಡಿಸಿಕೊಳ್ಳಬೇಕಾಗುತ್ತದೆ. ಉಪಭಾಷಾ ಪ್ರದೇಶವೊಂದರಲ್ಲಿ ನಿತ್ಯ ವ್ಯವಹಾರಕ್ಕಾಗಿ ಬಳಸುವ ಭಾಷೆ ಅಲ್ಲಿನ ಜನಪದರ ಭಾಷೆ. ಆದರೆ, ಗ್ರಾಮೀಣತೆ, ಗೇಯತೆ, ಸರಳತೆಗಳನ್ನು ತನ್ನ ಒಡಲಿನಲ್ಲಿಯೇ

ತುಂಬಿಕೊಂಡಿರುವಂಥದ್ದು ಜಾನಪದ ಭಾಷೆ. ಹೀಗಾಗಿ ಆಧುನಿಕ ಸಂವೇದನೆಯಿಂದ ಕೂಡಿರುವ 'ನಾದಲೀಲೆ', 'ನೀ ಹಿಂಗ ನೋಡಬ್ಯಾಡ ನನ್ನ' ಮುಂತಾದ ಕವಿತೆಗಳು ಹೊರಗಡೆಯಿಂದ ಜಾನಪದವೆಂಬಂತೆ ಕಂಡುಬಂದರೂ ಅವುಗಳ ಹಿಂದಿರುವ ಸಂವೇದನೆ, ಚಿಂತನಾಲಹರಿ ಜಾನಪದವಲ್ಲ. ಪಂಪನಂತೆ ಮಾರ್ಗ-ದೇಸಿ ಎರಡರಲ್ಲೂ ಸಮನ್ವಯತೆ ಸಾಧಿಸುವ ರೀತಿಯಲ್ಲಿ ಬೇಂದ್ರೆಯವರ ಕವನಗಳು ಸಹ ಜಾನಪದ ತನ್ನದೇ ಆದ ಮೌಲ್ಯ ಪ್ರಪಂಚವನ್ನು ನಿರ್ಮಿಸುವ ಕವಿತೆಗಳಾಗಿವೆ.

ಬೇಂದ್ರೆಯವರ ಕಾವ್ಯಗಳು ಈ ರೀತಿ ವಿಸ್ಮಯಕಾರಿಯಾದ ವೈಶಿಷ್ಟ್ಯವನ್ನು ಹೊಂದಲು ಅವರ ಶೈಲಿ ವೈವಿಧ್ಯವೂ ಒಂದು ಪ್ರಮುಖ ಕಾರಣವಾಗಿದೆ. ಲಯದ ಬಗ್ಗೆ ಬೇಂದ್ರೆ ಅವರು ತಳೆದ ನಿಲುವು ಅವರ ಶೈಲಿ ವೈವಿಧ್ಯಕ್ಕೆ ಪ್ರೇರಣೆಯಾಗಿದೆ. ಅವರು ನಿಯತವಾದ ಮಾತ್ರ ಲಯಕ್ಕೆ ಮಾತ್ರ ಅಂಟಿಕೊಳ್ಳದೆ ನಾದದ ವಿನ್ಯಾಸಗಳನ್ನು ವ್ಯಾಪಕವಾಗಿ ಬಳಸಿಕೊಳ್ಳುವ ಸ್ವಾತಂತ್ರ್ಯವಿರುವ ಅಂಶಲಯವನ್ನು ಹೆಚ್ಚಾಗಿ ಬಳಸಿದರು. ಯಾವ ಛಂದದಲ್ಲಿ ಸ್ವಚ್ಛಂದತೆಯ ಸೂಚನೆಯಿಲ್ಲವೋ ಅದು ಛಂದವಲ್ಲ 'ಬಂಧ' ಎಂದು ಹೇಳಿದ ಬೇಂದ್ರೆ ಛಂದೋ ರೂಪದ ಯಾವ ಕಟ್ಟುಪಾಡಿಗೂ ನಿಲುಕದ, ಪ್ರತಿಯೊಂದು ಪದ್ಯಕ್ಕೂ ತನ್ನದೇ ಆದ ಬಂಧವಿರುವ ಹಲವಾರು ಕವಿತೆಗಳನ್ನು ಬರೆದಿದ್ದಾರೆ. 'ಕುಣಿಯೋಣು ಬಾರಾ', 'ಪಾತರಗಿತ್ತಿ ಪಕ್ಕ', 'ಸಚ್ಚಿದಾನಂದ', 'ಜೋಗಿ', 'ನಾದಲೀಲೆ' ಮೊದಲಾದವು ಇದಕ್ಕೆ ಉತ್ತಮ ಉದಾಹರಣೆಗಳಾಗಿವೆ. ಈ ಬಗೆಯ ಬಂಧವನ್ನು ಅವರು ಮತ್ತೆ ಮತ್ತೆ ಪುನರಾವರ್ತನೆ ಮಾಡದೇ ಹೋದದ್ದು ಅವರ ಕಾವ್ಯ ಪ್ರಜ್ಞೆಯನ್ನು ತಿಳಿಸುತ್ತದೆ. ಭಾಷೆಯ ಇತರ ನೆಲೆಗಳಾದ ವರ್ಣನೆ, ಸಂಭಾಷಣೆ, ಆಲೋಚನೆಗಳೆಂಬ ಸಾಧ್ಯತೆಗಳಿಗೆ ತಕ್ಕಂತೆ ಕಾವ್ಯಭಾಷೆಯ ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತಾರೆ.

೧೯೩೨ರಲ್ಲಿ ಪ್ರಕಟವಾದ 'ಗರಿ'ಯ ಪ್ರಾರಂಭದಲ್ಲಿ ಸಹೃದಯರಿಗೆ ಬೇಂದ್ರೆಯವರು ಹೀಗೆ ಹೇಳುತ್ತಾರೆ. "ಈ ಕಾವ್ಯ ಮಾಲೆಯೊಳಗಿನ ನನ್ನ ಕವನಗಳು ಇ.ಸ. ೧೯೧೮-೧೯೩೨ ರವರೆಗೆ ಎಂದರೆ ಹೋದ ಹದಿನಾಲ್ಕು ವರ್ಷಗಳಲ್ಲಿ ಬರೆದವು. ಎರಡು ಮೂರು ಕವನಗಳನ್ನು ಬಿಟ್ಟು ಉಳಿದೆಲ್ಲವೂ ಬರೆದ ಕಾಲದ ಕ್ರಮದಲ್ಲಿಯೇ ಇಡಲಾಗಿದೆ". ಬೇಂದ್ರೆಯವರಿಗೆ ಆಗ ೩೬ ವರ್ಷ. 'ಗರಿ'ಯ ಕವನಗಳಿಂದ ತಾವು ಯಾವ ರೀತಿ ಕಾಣಿಸಬೇಕೆನ್ನುವುದನ್ನೂ ಬೇಂದ್ರೆಯವರು ಸಹೃದಯರಿಗೆ ಹೇಳುತ್ತಾರೆ. "ಕನ್ನಡದ ಅಶರೀರ ವಾಣಿಯ ಸಾವಿರ ಬಾಯಿಗಳಿಂದ ತನ್ನ ಕನಸನ್ನು ಕನ್ನಡಿಸುತ್ತಿದೆ. ಆ ಸಾವಿನ ಬಾಯಿಗಳಲ್ಲಿ ನನ್ನದೊಂದು' ಅದೆ ನನ್ನ ಧನ್ಯತೆ. ಕನ್ನಡದ ಪುನರ್ಜನ್ಮದ ಪ್ರಭಾತದಲ್ಲಿ ಹಾಡುವ ಕವಿಗಣದಲ್ಲಿ ನಾನೊಬ್ಬ". ಈ ಸಂಗ್ರಹದಲ್ಲಿ ಭಾಷೆಯ ಬಗ್ಗೆ ತಮ್ಮ ಧೋರಣೆಯನ್ನು

ಹೇಳುವಾಗ, ಹೇಗೆ ತಾವು ಕರ್ನಾಟಕ ತತ್ವಕ್ಕೆ ದುಡಿದಿದ್ದಾರೆನ್ನುವುದನ್ನೂ ಸೂಚಿಸುತ್ತಾರೆ; "ಈ ಕವನದೊಳಗಿನ ಭಾಷಾ ಶೈಲಿಯ ಬಗೆಗೆ ಒಂದು ಮಾತು. ಇಲ್ಲಿ ತುಂಗಭದ್ರೆಯ ಉತ್ತರಾಪಥದ 'ದೇಶಿ'ಯ ಮಾರ್ಗವನ್ನು ಹುಡುಕುವ ಹಾಗೆಯೇ ಹುಟ್ಟಿಸುವ ಕುರುಹಿದೆ..... ಮೈಸೂರು, ಧಾರವಾಡ, ಮಂಗಳೂರು, ಎಂಬ ಭೇದವಡಗಿ, ಹಳ್ಳಿ ಹಳ್ಳಿಗಳಲ್ಲಿಯೂ ಹೆಣ್ಣು ಗಂಡು ಎಲ್ಲರೂ ಒಂದೇ ಕನ್ನಡವನ್ನು ಆಡಬೇಕು".

ಈ ರೀತಿಯ ಮಾತುಗಳ ಮೂಲಕ ಇಡೀ ಕರ್ನಾಟಕವನ್ನು ಪ್ರತಿನಿಧಿಸುವ ಕರ್ನಾಟಕದ ಪುನರುಜ್ಜೀವನಕ್ಕೆ ಟೊಂಕ ಕಟ್ಟಿದ ನಾಯಕನೊಬ್ಬನ ಚಿತ್ರ ನಮ್ಮ ಕಣ್ಣ ಮುಂದೆ ನಿಲ್ಲುತ್ತದೆ. 'ಹಂಪಿ– ವಿಜಯನಗರ ದರ್ಶನ', 'ಮುದ್ದಣ', 'ಕೋಗಿಲೆ', 'ಕನಸಿನೊಳಗೊಂದು ಕನಸು', 'ಸೀಮೊಲ್ಲಂಘನೆ', ಪಂಪನ ನೆನದು', 'ಹಕ್ಕಿ ಹಾರುತ್ತಿದೆ ನೋಡಿದಿರಾ', 'ಮೈಸೂರು' ಹೀಗೆ ಅನೇಕ ಕವನಗಳಲ್ಲಿ ಕನ್ನಡ ನಾಡ ಕಂದಮ್ಮಗಳು ಸಿಡಿದೇಳುವಂತಹ ರೀತಿಯಲ್ಲಿ ಕವನಗಳನ್ನು ರಚಿಸಿ ಸ್ಫೂರ್ತಿಸೆಲೆಯಾಗಿದ್ದಾರೆ. ಇದೇ ಕವಿಯ ಉದ್ದೇಶವೂ ಆಗಿದೆ. 'ನರಬಲಿ'ಯಂತಹ ಕವನಗಳಲ್ಲಿ ಬ್ರಿಟಿಷ್ ಸರಕಾರದ ವಿರುದ್ಧ ಹೋರಾಡುವವರಿಗೆ ಈ ಕವಿ ಮಾತು ಕೊಟ್ಟ ಹಾಗಿದೆ. ಮಗು ಭಾಸ್ಕರ ಸತ್ತಾಗ ಬರೆದ 'ಗಿಳಿಯು ಪಂಜರದೊಳಿಲ್ಲಾ' ಮತ್ತು ಮಗು ಪಾಂಡುರಂಗನ ಹುಟ್ಟಿದ ಹಬ್ಬಕ್ಕೆ ಬರೆದ 'ನನ್ನಕಂದ' ಕವಿಯ ವೈಯಕ್ತಿಕ ಪಾಡು ಹಾಡಾಗುವ ಹವಣಿಕೆಯನ್ನು ತೋರಿಸುತ್ತದೆ. 'ನಗೀನವಿಲು', 'ಹುದುಗಲಾರದ ದುಃಖ', 'ಬಿಸಿಲುಗುದುರೆ', 'ನನಕೈಯ ಹಿಡಿದಾಕೆ'ಯಂತಹ ಪ್ರೇಮ ಕವನಗಳು ಕವಿಯ ವೈಯಕ್ತಿಕ ನೋವು–ನಲಿವುಗಳನ್ನು ಕಾವ್ಯವಾಗಿಸುವ ರಸಪೂರಿತ ಪ್ರಯತ್ನಗಲಾಗಿ 'ಸಖೀಗೀತ'ದಂತಹ ಕಾವ್ಯವೊಂದನ್ನು ಎದುರು ನೋಡುತ್ತದೆ.

"ಬೇಂದ್ರೆಯವರ 'ತುತ್ತಿನ ಚೀಲ' ನಿರ್ಗತಿಕರ ಜೊತೆಗೆ ಸಹಾನುಭೂತಿಯನ್ನೂ, ಹಸಿವಿನ ಪ್ರಶ್ನೆಯ ಮುಂದೆ ದೇವರೂ ಅಮುಖ್ಯ ಎನ್ನಿಸುವ ತಪ್ತೆಯನ್ನೂ, ಈ ಸಮಸ್ಯೆಗೆ ಪರಿಹಾರ ಬೇಕೆನ್ನುವ ಕಳಕಳಿಯನ್ನೂ ವ್ಯಕ್ತಪಡಿಸುತ್ತದೆ. 'ಪಾತರಗಿತ್ತಿ ಪಕ್ಕ' ಪ್ರಕೃತಿಯ ಆಕರ್ಷಣೆಗೂ, ಪ್ರಕೃತಿಯ ಮೂಲಕ ನಾವು ಕಾಣಬಹುದಾದ ನಂದನದ ತೋಟಕ್ಕೂ ತಕ್ಕ ವಸ್ತುವಾಗಿದೆ. 'ಕುಣಿಯೋಣು ಬಾರಾ' ತನ್ಮಯತೆಯ ಪರಾಕಾಷ್ಠೆಯನ್ನೂ, ಜಗತ್ತೆಲ್ಲವೂ ಆನಂದಮಯವಾಗಲಿ ಎನ್ನುವ ಅಭೀಪ್ಸೆಯನ್ನೂ ಮೈಗೂಡಿಸಿಕೊಂಡಿದೆ. ಹೀಗೆ ಕಾವ್ಯದ ಮೂಲಭೂತ ವಸ್ತುಗಳಾದ ಹುಟ್ಟು, ಸಾವು, ಪ್ರಕೃತಿ, ದೇವರು, ಮನುಷ್ಯನ ಸುಖ–ದುಃಖ ಇವುಗಳೆಲ್ಲದರ ಅರ್ಥದ ಹುಡುಕಾಟ, ಈ ಸಂಗ್ರಹದ ಒಟ್ಟು ನೋಟದಲ್ಲಿ ಕಾಣಿಸುತ್ತದೆ. ಈ ಎಲ್ಲಾ ವಸ್ತುವಿಗೂ ನಾಂದೀ ರೂಪದಲ್ಲಿರುವ 'ಬೆಳಗು' ಹೊಸಗನ್ನಡದ ಉದಯಕಾಲವನ್ನ,

ಹೊಸ ಕವಿಯೊಬ್ಬ ತನ್ನ ಕಾಲ ಮೇಲೆ ನಿಂತು ಸುತ್ತಲಿನ ಬದುಕನ್ನು ನೋಡುವುದಕ್ಕೆ ಪ್ರಸ್ತಾವನೆಯಾಗಿದೆ".[೧]

ಬೇಂದ್ರೆಯವರ ಕಾವ್ಯದ ಮೋಡಿಗೆ ಸಿಲುಕಿದ ಅದೆಷ್ಟೋ ಸಹೃದಯರು ಅವರನ್ನು ಜಾದುಗಾರ, ಮಾಟಗಾರ, ಗಾರುಡಿಗ, ಮಾಂತ್ರಿಕ, ಮೋಡಿಕಾರ ಎಂದು ಕರೆದಿದ್ದಾರೆ. ಬೇಂದ್ರೆಯವರ ಕವನಗಳೇ ಹಾಗೆ. ಎಲ್ಲರನ್ನೂ ಸಮ್ಮೋಹನಗೊಳಿಸುವ, ಮನಸ್ಸನ್ನು ಸೂರೆಗೊಳ್ಳುವ ಶಕ್ತಿಯಿದೆ. ಶ್ರೋತೃಗಳ ಮನಸ್ಸನ್ನು ಆಕರ್ಷಿಸುತ್ತಾ ಅವರನ್ನು ಮಂತ್ರ ಮುಗ್ಧರನ್ನಾಗಿಸುತ್ತವೆ. ಆಶ್ಚರ್ಯದಿಂದ ಎಲ್ಲರ ಮೈ ನವಿರೇಳಿಸುತ್ತವೆ.

ಬೇಂದ್ರೆಯವರ ಪ್ರಕಾರ "ಗದ್ಯದ ಮುಖ್ಯ ಲಕ್ಷಣವು ಅರ್ಥವ್ಯಕ್ತಿ, ಪದ್ಯದ ಲಕ್ಷಣವು ಹೃದ್ಯತೆ"........ ಕವಿತೆ ಅವಿಚಾರಿತ ರಮಣೀಯವಾಗಿರಬೇಕು; ವಿಚಾರ ಮಾಡುವ ಕಾರಣವಿರಬಾರದು....... ಕಿರಿದರಲ್ಲಿ ಹಿರಿದಾದ ಅರ್ಥ ತುಂಬುವ ಸಾಮರ್ಥ್ಯವು ಕವಿಯ ಪ್ರಥಮ ನೈಪುಣ್ಯವು....... ಬಯಲಲ್ಲಿ ಸುತ್ತಾಡಿದಂತೆ ಗದ್ಯದ ಗತಿ; ಆಟದಟ್ಟರ ಮೇಲೆ ಕುಣಿದಂತೆ ಪದ್ಯದ ಛಂದ...... ಪದ್ಯಕಾವ್ಯದ ಉದ್ದೇಶವು ಅರ್ಥ ವ್ಯಕ್ತಿಯಾಗಿರದೆ ಹೃದ್ಯತೆಯಾಗಿದ್ದರೂ ಪ್ರತಿಯೊಂದು ಕವನಕ್ಕೆ ಏನಾದರೂ ಅರ್ಥವಿದ್ದೇ ಇರುವುದು. ಆ ಸ್ವಾಭಾವಿಕ ಅರ್ಥವನ್ನು ಮೊದಲು ಗ್ರಹಣ ಮಾಡಬೇಕು. ಅದೇ ವಾಚ್ಯಾರ್ಥ. ಯಾವುದೋ ಒಂದು ವಸ್ತುವನ್ನು ಕುರಿತು ಏನೋ ಕೆಲವು ಮಾತು ಹೇಳಿರುವವು. ಆ ಮಾತಿನ ಅರ್ಥ ತಿಳಿದುಕೊಳ್ಳಬೇಕು".[೨] ಹೀಗೆ "ಅರ್ಥವಿಲ್ಲ, ಸ್ವಾರ್ಥವಿಲ್ಲ ಬರಿಯ ಭಾವಗೀತೆ" ಎಂದೂ 'ಇದು ಮಂತ್ರಕೊಗ್ಗದ ಶಬ್ದಗಳ ಪವಣಿಸುವ ತಂತ್ರ' ಎಂದೂ ಹೇಳುತ್ತಿದ್ದ ಹಾಗೆಯೇ 'ಅರ್ಥ' ಬೇಕು ಎಂತಲೂ ಹೇಳುತ್ತಾರೆ. ಒಟ್ಟಿನಲ್ಲಿ ಬೇಂದ್ರೆ ಸಾಧಿಸಿದ ರಮಣೀಯತೆಗೆ ಗದ್ಯದಲ್ಲಾಗಲೀ, ಪದ್ಯದಲ್ಲಾಗಲೀ ಅರ್ಥ ಬೇಕೆನ್ನುವುದೇ ಇಲ್ಲ. ಅರ್ಥ ಬಿಟ್ಟು ಮುನ್ನಡೆಯುವುದೂ ಇಲ್ಲ.

ಭಾಷಾ ಸಂಯೋಜನೆಯನ್ನು ಪ್ರಯೋಗಶೀಲವಾಗಿಸಿದ ಅವರ ವೈವಿಧ್ಯಮಯ ಶೈಲಿಯನ್ನು ಗುರುತಿಸಲು ಸಹಾಯಕವಾಗುವಂತೆ ಕವಿ ಚೆನ್ನವೀರ ಕಣವಿಯವರು ಉಲ್ಲೇಖಿಸಿರುವ ಕೆಲವು ಉದಾಹರಣೆಗಳನ್ನು ಇಲ್ಲಿ ಗಮನಿಸಬಹುದು.

೧. ಪ್ರಾದೇಶಿಕವಲ್ಲದೆ, ಶಿಷ್ಟ ಭಾಷೆಯ, ಲಯಬದ್ಧವಾದ ಸ್ವಗತದ ಧಾಟಿಗೆ –

ಯಾಕೋ ಕಾಣೆ<br>
ರುದ್ರ ವೀಣೆ<br>
ಮಿಡಿಯುತಿರುವುದ ('ಗರಿ' ಸಂಕಲನ)

೨. ಗೋಮಾತೆಗೆ ಪ್ರಾಧಾನ್ಯವಿತ್ತ ಸಂಭಾಷಣಾರೂಪದ ಪ್ರಾದೇಶಿಕ ಶೈಲಿಗೆ –

ಸುತ್ತೆಲ್ಲಾ ಕತ್ತಲಾ
ಒಳಗ ಬೆಳಗತದ ದೀಪಾ
ಬಾ ಸಮೀಪಾ ('ನಾದಲೀಲೆ' ಸಂಕಲನ)

೩. ಹತಾಶೆಗೊಂಡ ಹೆಣ್ಣಿನ ಅಂತರಂಗ ನಿವೇದನೆಯ ಗ್ರಾಮ್ಯವಾ ಆಡು ಮಾತಿನ ಪ್ರಾದೇಶಿಕ ಶೈಲಿಗೆ –

"ಹುಟ್ಟಾ ಯಾಂವಾ ನಗಿ ಕ್ಯಾದಗಿ
ಮುಡಿಸಿಕೊಂಡಾವಾ
ಕಂಡ ಹೆಣ್ಣಲೇ ಪ್ರೀತಿ ವೀಳ್ಯೆ
ಮಡಚಿಕೊಂಡಾವಾ" (ಸಖೀಗೀತ)

೪. ಪ್ರಾದೇಶಿಕತೆಯಿಂದ ಕೂಡಿದ ಆಲೋಚನಾ ಪ್ರಧಾನವಾದ ನಾಟಕೀಯ ಸ್ವಗತದ ಧಾಟಿಗೆ–

"ನೋಡ್ ನೋಡ್ತ ದಿನಮಾನಾ
ಆಡಾಡ್ತಾ ಆಯುಷ್ಯ
ನಡದಽದ ನಡದ್ಯದ ನಡದಽದ" (ಗರಿ)

೫. ಗೇಯತೆಯಿಲ್ಲದ, ನಡುಗನ್ನಡದ ಛಾಯೆಯುಳ್ಳ ಶಿಷ್ಟ ಭಾಷೆಯಲ್ಲಿ ಕವಿತೆಯ ಆಲೋಚನಾ ನಿರೂಪಣೆಗೆ –

"ಹುಳು ಹೊಕ್ಕ ಹೂವಿನೊಳ ಹೊಕ್ಕು
ಅರಿತವರುಂಟೆ?
ಮಗಮಗಿಸಿ ಹೋದನಗೆ ಹೂವ
ಮರೆತವರುಂಟೆ? (ಉಯ್ಯಾಲೆ)

ಬೇಂದ್ರೆಯವರು ರಸಾನುಭವದಲ್ಲಿ ಮುಳುಗಿದಾಗ ಅವರ ಮನಸ್ಸಿನಲ್ಲಿ ಮೊದಲು ಹುಟ್ಟುವುದು ನಾದ. ಭಾಷೆಯ ನಾದಗುಣವನ್ನು ಅವರಂತೆ ತಿದ್ದಿದವರು ವಿರಳ. ಈ ನಾದಗುಣ ಲಯದ ಕಲ್ಪನೆಗಿಂತ ಭಿನ್ನವಾದದ್ದು.

ಉದಾ: ಅಂತರಂಗದಾ ಮೃದಂಗ
ಅಂತು ತೋಂತನಾನ .......
ಏಲಾವನ ಲವಲೀಬನ
ಲವಂಗ ಬನಗಳಲಿ

ಎಂಬಲ್ಲಿ ಅರ್ಥರಹಿತ ಧ್ವನಿ ಸಂಯೋಜನೆ ಹಾಗೂ ಅರ್ಥಸಹಿತ ಶಬ್ದ ಜಾಲ, ಎರಡೂ ಸೇರಿ, 'ಮಾತು ಮಾತು ಮಥಿಸಿ ಬಂದ ನಾದದ ನವನೀತ'ವಾಗಿ ಪ್ರತಿಯೊಂದು ಅಕ್ಷರವೂ ಶಬ್ದವೂ ನಾದದ ಉದ್ದೀಪ ಕತೆಗಾಗಿಯೇ ಮೆಲುಕು ಹಾಕುವಂತಿರುತ್ತವೆ. ನಾದವೇ ಅರ್ಥದ ಕೈಹಿಡಿದು ನಡೆಸುವುದೇನೋ ಎಂಬಂತೆ ಕವಿತೆಗಳ ಚಲನೆ ಕಂಡುಬರುತ್ತದೆ. ಉದಾಹರಣೆಗೆ,

'ಜುಮ್ ಜುಮು ರುಮು
ಜುಮು ಗುಂಗುಣು
ದುಮುದುಮು ನಾದದ
ನದಿಯೊಂದು ನಡೆದಾಂಗ'

ಇಲ್ಲಿ ಬರುವ ನಾದದ ಪ್ರತಿಮೆ ಕವಿಯ ಅಸಾಧಾರಣ ಪ್ರತಿಭೆಗೆ ಮಾತ್ರ ನಿಲುಕುವಂಥದ್ದು.

ಬೇಂದ್ರೆಯವರ ಕಾವ್ಯ ಭಾಷೆಯ ಇನ್ನೆರಡು ಪ್ರಮುಖ ಲಕ್ಷಣಗಳೆಂದರೆ, ಪ್ರಾಸ ಮತ್ತು ಶ್ಲೇಷೆಯ ಬಗೆಗಿನ ಅವರ ವಿಶೇಷವಾದ ಒಲವು. ಪ್ರಾಸ ಬೇಂದ್ರೆಯವರ ಕವಿತೆಗಳಲ್ಲಿ ಅಲಂಕಾರ ಮಾತ್ರವಾಗಿರದೆ ಕಾವ್ಯದ ಆಂತರಿಕ ಅಗತ್ಯವಾಗಿ ಬರುವುದನ್ನು ಗುರುತಿಸಿ ಕೆ.ವಿ. ತಿರುಮಲೇಶ್ "ಪ್ರಾಸಗಳನ್ನು ಜೋಡಿಸುತ್ತ ಹೋದಂತೆ ಅವರು ನಾದಲೋಕದ ಮಾಂತ್ರಿಕತೆ ಮತ್ತು ಅರ್ಥದ ಜಗತ್ತಿನ ಕೌತುಕಗಳೆರಡನ್ನೂ ಮನಗಾಣಿಸುತ್ತಾರೆ" ಎಂದಿದ್ದಾರೆ. ಕವಿತಾ ರಚನೆಯನ್ನು ಬೇಂದ್ರೆ ಭಾಷೆಯೊಂದಿಗೆ ಅಥವಾ ಪದಗಳೊಂದಿಗೆ ಆಡುವ ಆಟ ಎಂದು ತಿಳಿದಿದ್ದುದರಿಂದ ಶ್ಲೇಷೆಯ ಬಗೆಗಿನ ಅವರ ಆಸಕ್ತಿ ವಿಶಿಷ್ಟವಾದುದು.

'ಬೇಂದ್ರೆನಗೋಳು ಅದು ಹೋಳು
ಹೋಳು ಪಡುವುದಷ್ಟು ಪಾಡು ಆಗಲಿಲ್ಲ'

ಹೀಗೆ ಶ್ಲೇಷೆಯ ಪ್ರಮಾಣ ಅವರ 'ಕತೆಯಾದಳು ಹುಡುಗಿ' ಕವಿತೆಯಲ್ಲಂತೂ ಬೇಂದ್ರೆ ಉದ್ದಕ್ಕೂ ಬಳಸುತ್ತಲೇ ಹೋಗಿದ್ದಾರೆ. ಬೇಂದ್ರೆಯವರ ಕಾವ್ಯ ಭಾಷೆಯ ರೂಪಕ ಶಕ್ತಿ ವಿನೂತನವಾದ ಪ್ರತಿಮಾ ಸೃಷ್ಟಿಗೂ ನೆಲೆಯಾಗಿದ್ದು ಅದು ಹೆಚ್ಚು ಧ್ವನಿಪೂರ್ಣವೂ ಆಗಿದೆ. ಅವರ ಕಾವ್ಯಗಳಲ್ಲಿರುವ ಮತ್ತೊಂದು ವಿಶಿಷ್ಟವಾದ ಲಕ್ಷಣವೆಂದರೆ, ಅದು ಕೆಲವು ಸಂದರ್ಭಗಳಲ್ಲಿ ಕವಿಯ ವ್ಯಕ್ತಿತ್ವದೊಡನೆ ಅವಿನಾಭಾವ ಸಂಬಂಧ ಹೊಂದಿರುವುದು. ಉದಾ:– 'ಮಲ್ಲಾಡದ ಗಿಣಿ', 'ನಿರ್ಭಯ', 'ಶುಭ ನುಡಿಯೆ ಶಕುನದ ಹಕ್ಕಿ' ಇವು ಕವಿಯ ಭಾವಸ್ಥಿತಿಗೆ ಒಡ್ಡಿದ ಪ್ರತಿಮೆಗಳು. 'ನಿಗಿನಿಗಿ ಮುಗಿಲ' ಕವಿತೆ ಜೀವನದೊಳಗಿನ ಪ್ರಖರತೆ, ಅದರಿಂದ ಬರಲಿರುವ ಕರುಣಾವರ್ಷ – ಈ ರಮ್ಯತೆಗೆ ಒಡ್ಡಿದ ನಿಸರ್ಗ ಪ್ರತಿಮೆಯಾಗಿದೆ.

ಅವರ 'ಪಾರಿಜಾತ' ಕವನ ದಿವ್ಯ ಜೀವನದ ಅಭೀಪ್ಸೆಯ ಕುರುಹಾಗಿದೆ. 'ಚಿಗರೆ' ಬದುಕಿನಲ್ಲಿ ಮಿಂಚಿ ಮಾಯವಾಗುವ ಸತ್ಯಕ್ಕೆ ಒಡ್ಡಿದ ಪ್ರತಿಮೆಯಾಗಿದೆ. 'ಕರಡೀ ಕುಣಿತ'ದ ಪ್ರತಿಮೆಗಳು ಐಂದ್ರಿಯರ ಅನುಭವಗಳಾಗಿರುವುದರೊಂದಿಗೆ ಶೋಷಣೆಯನ್ನೂ ದಾಸ್ಯವನ್ನೂ ಧ್ವನಿಸುತ್ತವೆ. ಬೇಂದ್ರೆಯವರ ಸಂವೇದನೆ ಭಾವ ಬುದ್ಧಿಗಳ ವಿದ್ಯದಾಲಿಂಗನದಿಂದ ರೂಪಿತ–ವಾದದ್ದೆನ್ನುವುದರಲ್ಲಿ ಸಂಶಯವಿಲ್ಲ.

ಕಾವ್ಯಗಳಲ್ಲಿ ತಮ್ಮದೇ ಆದ ವಿವಿಧ ಪ್ರಯೋಗಗಳಿಂದ ಪರಂಪರೆಗೆ ಗಟ್ಟಿತನವನ್ನೂ ಅರ್ಥ ಪೂರ್ಣತೆಯನ್ನೂ ತಂದುಕೊಟ್ಟ ಬೇಂದ್ರೆಯವರು ಪ್ರತಿಮೆಗಳ ಪ್ರಯೋಗದಲ್ಲಿಯೂ ತಮ್ಮದೇ ಹಾದಿ ತುಳಿದು ಅವುಗಳನ್ನು ಕವಿತೆಯ ಉದ್ದೇಶಕ್ಕೆ ಅಧೀನವಾಗಿರುವಂತೆ ಭಾವವಾಹಕಗಳಾಗಿ ಯೋಜಿಸಿದರು. ಅವರ ಕಾವ್ಯದ ಉಪಮೆ, ರೂಪಕ, ಪ್ರತೀಕಗಳಿಗೆ ಅರ್ಥ ವಿವರಣೆಯ ವಿಧಾನವೇ ಮುಖ್ಯವಾಗಿ ಅವು ತಮ್ಮ ಹೊಸತನದಿಂದ ಬೆಳಗುತ್ತವೆ. ಹಲವಾರು ಕ್ಷೇತ್ರಗಳಿಂದ ಪುಷ್ಟಿಗೊಂಡ ಬೇಂದ್ರೆಯವರ ಪ್ರತಿಮಾಲೋಕ ಡಾ॥ ಜಿ. ಎಸ್. ಆಮೂರ ಅವರು ಅಭಿಪ್ರಾಯಪಟ್ಟಿರುವಂತೆ, "ಬೇಂದ್ರೆಯವರೇ ಸೂಚಿಸಿದ ಹಾಗೆ, ಶ್ರೇಷ್ಠ ಕವಿಯೆಂದೆನಿಸಿಕೊಳ್ಳಲು ಮಹಾಕಾವ್ಯವನ್ನು ರಚಿಸಲೇಬೇಕೆಂಬ ನಿಯಮವೇನೂ ಇಲ್ಲ. ದರ್ಶನ, ಭಾಷಾ ಸಂಪತ್ತು, ಪ್ರತಿಮಾ ಸೃಷ್ಟಿ ಕೌಶಲ್ಯ, ಛಂದಸ್ಸಿನ ಸಫಲ ಪ್ರಯೋಗ, ಶೈಲಿಯ ವೈವಿಧ್ಯ – ಇಂಥ ಯಾವುದೇ ಮಾನದಂಡಗಳಿಂದ ಬೇಂದ್ರೆ ಕಾವ್ಯವನ್ನು ಅಳೆದರೂ ಅವರ ಸಾಧನೆ ಯಾವ ಮಹಾಕವಿಯ ಸಾಧನೆಗಿಂತಲೂ ಕಡಿಮೆಯೆಂದೆನಿಸಲಾರದು".[೩]

## ಅಡಿಟಿಪ್ಪಣಿಗಳು

೧. ಬೇಂದ್ರೆಯವರ ಕಾವ್ಯದ ವಿಭಿನ್ನ ನೆಲೆಗಳು, ಸುಮತೀಂದ್ರ ನಾಡಿಗ, ಕರ್ನಾಟಕ ಬುಕ್ ಏಜೆನ್ಸಿ, ೧೯೯೮, ಪುಟ. ೧೦೯.

೨. ಸಾಹಿತ್ಯದ ವಿರಾಟ್ ಸ್ವರೂಪ, ದ.ರಾ. ಬೇಂದ್ರೆ, ಪುಟ. ೩೧೦.

೩. ಭುವನದ ಭಾಗ್ಯ, ಜಿ. ಎಸ್. ಆಮೂರ ಪ್ರಿಯದರ್ಶಿನಿ ಪ್ರಕಾಶನ, ಪುಟ. ೩೭೪.

*****

# ಅಧ್ಯಾಯ – ೬

# ಉಪಸಂಹಾರ

ಆಧುನಿಕ ಕನ್ನಡ ಕಾವ್ಯ ಪ್ರಪಂಚದಲ್ಲಿ ಅಸಂಖ್ಯಾತ ಪ್ರೇಮ ಕವನಗಳು ರಚಿತವಾಗಿವೆ. ರಚಿತವಾಗುತ್ತಲೂ ಇವೆ. ಪ್ರೀತಿ, ಪ್ರೇಮ, ಪ್ರಣಯ ಎಂಬುದು ಜೀವನದಲ್ಲಿ ಬಹುಮುಖ್ಯವಾದ ಅಂಶಗಳು. ಈ ಅಂಶಗಳು ಮುಂದುವರೆದು ಕೋಪ–ತಾಪ, ವಿರಹ–ವೇದನೆಗಳಿಗೂ ನಾಂದಿ ಹಾಡುವುದುಂಟು. ಇವೆಲ್ಲವೂ ಸಹ ಒಲವಿನ ಹಲವು ಮುಖಗಳು. ಎಲ್ಲರಿಗೂ ಈ ಎಲ್ಲಾ ಮುಖಗಳು ಮುಖಾಮುಖಿಯಾಗದೇ ಇರಬಹುದು. ಆದರೆ ಬಹುತೇಕ ಮಂದಿ ಈ ಮುಖಗಳನ್ನು ಕಂಡು ಅನುಭವಿಸಿದ್ದಾರೆ. ಈ ದೃಷ್ಟಿಯಿಂದ ದಾಂಪತ್ಯದ ಅನುಭವ ತುಂಬಾ ಔಚಿತ್ಯವಾದುದು.

ನಮ್ಮ ನವೋದಯ ಕಾಲದ ಅಗ್ರಮಾನ್ಯ ಕವಿಗಳೆನಿಸಿದ, ಕುವೆಂಪು, ಬೇಂದ್ರೆ, ಕೆ.ಎಸ್.ನರಸಿಂಹಸ್ವಾಮಿ, ಪು.ತಿ.ನ. ಹೀಗೆ ಹಲವಾರು ಕವಿಗಳ ಮೇಲೆ ಪ್ರಭಾವ ಬೀರಿದ ಕೃತಿ ಬಿ.ಎಂ.ಶ್ರೀ ಅವರ 'ಇಂಗ್ಲಿಷ್ ಗೀತಗಳು'. ಈ ನಿಟ್ಟಿನಲ್ಲಿ ನವೋದಯ ಕವಿಗಳು ಸಂಸ್ಕೃತ ಶಬ್ಧಗಳನ್ನು ಬಳಸುವಷ್ಟೇ ಸಹಜವಾಗಿ ದೇಸಿಪದಗಳನ್ನು, ಅಚ್ಚಗನ್ನಡವನ್ನು ಬಳಸಿ ಕಾವ್ಯಕಟ್ಟುವ ಪ್ರಕ್ರಿಯೆ ನಡೆಸಿದರು. ಬೇಂದ್ರೆಯವರು ಉತ್ತರಕರ್ನಾಟಕದ ಭಾಷೆಯನ್ನೂ, ಕುವೆಂಪುರವರು ಸಮನ್ವಯ ಭಾಷೆಯನ್ನೂ, ಕೆ.ಎಸ್.ನ ರವರು ಜನಸಾಮಾನ್ಯರು ದಿನನಿತ್ಯ ಬಳಸುವ ಭಾಷೆಯನ್ನೇ ಪ್ರಯೋಗಿಸುತ್ತಾ, ಒಲವಿನ ಕವನಗಳನ್ನು ರಚಿಸಿದರು. ಜನಮಾನಸಕ್ಕೆ ಹತ್ತಿರವಾದರು. ಹೀಗೆ ವ್ಯಷ್ಟಿ ಸಮಷ್ಟಿ, ಸಮನ್ವಯದ ಧ್ವನಿಯಲ್ಲಿ ಕಾವ್ಯಕಟ್ಟುವುದು ನವೋದಯ ಕಾಲದ ಕವಿಗಳಲ್ಲಿ ಕರಗತವಾದವು.

'ಪ್ರೇಮ' ಎಂಬುದು ಒಂದು ದಿವ್ಯವಾದ ಶಕ್ತಿ. ಅದನ್ನು ಕವಿಗಳು ನಿತ್ಯಜೀವನದಲ್ಲಿ ಅನುಭವಿಸುತ್ತಾ, ಪ್ರಣಯದ ಚಿತ್ರವನ್ನು ನಾನಾ ಮುಖಗಳಲ್ಲಿ ಕಂಡು ಅದರ ತಿರುಳನ್ನು ಕಾವ್ಯದ ಮೂಲಕ ನಮಗೆ ನೀಡಿರುತ್ತಾರೆ. ಇಂತಹ ಒಲವಿನ ಅನುಭವಗಳು ದಾಂಪತ್ಯ ಜೀವನದಲ್ಲಿ ಹೆಚ್ಚು. ಜೀವನದಲ್ಲಿ ಸುಖಮಯ ದಾಂಪತ್ಯ ಎಂಬುದು ಊಟದಲ್ಲಿ ಉಪ್ಪಿನಕಾಯಿ ಇದ್ದಂತೆ. ಹಳೆಯದಾದಷ್ಟು ಅದರ ಸ್ವಾದಿಷ್ಟತೆ ಹೆಚ್ಚುತ್ತಲೇ ಹೋಗುತ್ತದೆ. ಇಂತಹ ದಾಂಪತ್ಯದ ಸವಿರುಚಿಯನ್ನು ಕಾವ್ಯಕ್ಕಿಳಿಸಿ ಅದರ ಸತ್ವವನ್ನು ನಮಗೆ ಉಣಬಡಿಸುತ್ತಾರೆ. ಈ ಸತ್ವಭರಿತ ಕಾವ್ಯಗಳನ್ನು ನಾವು ಪದೇ ಪದೇ ತೆರೆದ ಹೃದಯದಿಂದ ಆಸ್ವಾದಿಸಬೇಕು. ಒಟ್ಟಾರೆಯಾಗಿ ಮನುಷ್ಯನ ಪ್ರೇಮ ವಿಕಸನವಾದಂತೆಲ್ಲಾ ಅದರ ಬಗೆಗಿನ ಅರಿವು ವಿಕಸನವಾಗುತ್ತಿರುತ್ತದೆ.

ಈ ಹಿನ್ನೆಲೆಯಲ್ಲಿ ನವೋದಯ ಕವಿಗಳ ಪ್ರೇಮಕಾವ್ಯಗಳನ್ನು ಗ್ರಹಿಸಿದಾಗ ಒಬ್ಬರಿಗಿಂತ ಒಬ್ಬರು ವಿಭಿನ್ನ ಸಾಲಿನಲ್ಲಿ ನಿಲ್ಲುತ್ತಾರೆ. ಕುವೆಂಪು ಅವರ ಪಾಲಿಗೆ ಹೆಣ್ಣು ಸಂಸಾರದ ಚೌಕಟ್ಟಿನೊಳಗೆ ಬರುವ ಸಂಗಾತಿ ಮಾತ್ರವಲ್ಲ. ಎಷ್ಟೇ ಮೂರ್ತವಾಗಿ ದಾಂಪತ್ಯಾನುಭವಗಳನ್ನು ಚಿತ್ರಿಸಿದರೂ ಸಂಸಾರ ಎನ್ನುವುದು ಅಧ್ಯಾತ್ಮ ಸಾಧನೆಯ ಒಂದು ಅಂಗ ಎಂಬ ದೃಷ್ಟಿಯೇ ಅವರಲ್ಲಿ ಸಹಜವಾಗಿ ನೆಲೆಗೊಂಡಿದೆ. ಇವರ ಕವನಗಳಲ್ಲಿ ಕಂಡುಬರುವ ಪ್ರೀತಿ ಒಂದು ರೀತಿಯ 'ಸ್ವರ್ಗೀಯ ಪ್ರೀತಿ' ದೈವಿಕ ಪ್ರೀತಿಯ ಛಾಯೆಯಾಗಿದೆ.

ಕುವೆಂಪು ಅವರಲ್ಲಿ ಆದರ್ಶವಾಗಿ ಕಾಣುವ ಪ್ರೀತಿ ಕೆ.ಎಸ್.ನ. ಅವರ ಪ್ರೇಮ ಕವಿತೆಗಳಲ್ಲಿ ನಮಗೆ ಕಾಣಿಸುವುದಿಲ್ಲ. 'ನನ್ನವಳು ನನ್ನೆದೆಯ ಹೊನ್ನಾಡನಾಳುವಳು, ಬೆಳಗುಗೆನ್ನೆಯ ಚೆನ್ನೆ ನನ್ನ ಮಡದಿ' ಎಂದು ಹೇಳುವ ಕೆ.ಎಸ್.ನ ಅವರು ಕಾವ್ಯಗಳಲ್ಲಿ ಗಂಡು-ಹೆಣ್ಣಿನ ಪ್ರೀತಿಯನ್ನು ಸಹಜ ಲಯದಲ್ಲಿ ಹಿಡಿದಿಟ್ಟಿರುವುದೇ ಇವರ ವೈಶಿಷ್ಟ್ಯ ಇವರು ಗಂಡ ತೆರೆದ ಮನಸ್ಸಿನಿಂದ ಹೆಂಡತಿಯನ್ನು ಬರಮಾಡಿಕೊಳ್ಳುವುದು ಹೆಂಡತಿ ಅಷ್ಟೇ ಆಸಕ್ತಿಯಿಂದ ಅವನ ಮನಸ್ಸನ್ನು ಪ್ರವೇಶಿಸುವ ಅಗತ್ಯವನ್ನು ತಮ್ಮ ಕವನಗಳಲ್ಲಿ ಪ್ರತಿಪಾದಿಸುತ್ತಾರೆ.

ಗಂಡು-ಹೆಣ್ಣಿನ ನಡುವಿನ ಒಲವು ದಾಂಪತ್ಯ ಜೀವನದ ಚೌಕಟ್ಟಿನೊಳಗೆ ಮಾತ್ರ ಅರಳಬಲ್ಲದೆಂಬುದನ್ನು ನಂಬುವ ಪು.ತಿ.ನ.ರವರು ಅವರ ಕೃತಿಗಳಲ್ಲಿ ವಿವಾಹ ಬಾಹಿರ ಪ್ರಣಯವು ದುರಂತವೆಂದೇ ಸಮರ್ಥಿಸುತ್ತಾರೆ. ಜಿಜ್ಞಾಸೆಯ ಕವಿಯೆಂದೇ ಹೆಸರುಳ್ಳ ಪು.ತಿ.ನ.ರವರ ಕಾವ್ಯಗಳು ಕೆ.ಎಸ್.ನ ಅವರ ಕಾವ್ಯಗಳಂತೇ ಸರಳೀಕೃತವಾಗಿಲ್ಲ. ಇವರು ಪ್ರೇಮದ ಸ್ವರೂಪವನ್ನು ಸಂಪೂರ್ಣವಾಗಿ ಅದರ ಸುಕೃತ-ವಿಕೃತ ರೂಪಗಳಡಿಯಲ್ಲಿ ಮನಗಂಡವರು. ಇದು ಇವರ ಕಾವ್ಯಗಳಲ್ಲಿ ಅಭಿವ್ಯಕ್ತವಾಗುತ್ತವೆ.

'ಒಲವೆ ನಮ್ಮ ಬದುಕು' ಎಂಬುದು ಬೇಂದ್ರೆಯವರ ಜೀವನ ವ್ಯಾಖ್ಯೆ. ಅವರು ತಮ್ಮ ಜೀವನದಲ್ಲೇ ಆಗಲಿ, ಸಾಹಿತ್ಯದಲ್ಲೇ ಆಗಲಿ ಸಮನ್ವಯ ಸಾಮರಸ್ಯ ಸೂತ್ರಗಳನ್ನು ಅನುಸರಿಸಿದರು. ಪ್ರೇಮ ಚಿಂತನೆಯಲ್ಲೇ ತಮ್ಮ ಬದುಕಿನ ಚಿಂತನೆಯನ್ನು ಕಂಡುಕೊಂಡವರು. ಚಿಕ್ಕಂದಿನಲ್ಲೇ ಅವರಿಗೆ ಪ್ರೇಮದ ಪೂರ್ಣರೂಪವಾಗಿ ಅವರ ತಾಯಿ ಕಣ್ತುಂಬಿಕೊಂಡರು. ಸ್ತ್ರೀ ವಿಚಾರವಾಗಿ ಬೇಂದ್ರೆಯವರಿಗೆ ಇರುವ ಕಳಕಳಿ, ಗೌರವ ತುಂಬಾ ವಿಶಿಷ್ಟವಾದುದು. 'ಹೆಣ್ಣು' ಹಾಗೂ 'ತಾಯಿ' ಎರಡನ್ನೂ ಒಂದೇ ದೃಷ್ಟಿಕೋನದಲ್ಲಿ ನೋಡುವ ಬೇಂದ್ರೆಯವರು ತಾವು ಬೆಳೆದಂತೆಲ್ಲಾ ಸ್ತ್ರೀಪರ ಚಿಂತನೆಗಳನ್ನೂ ಮೈಗೂಡಿಸಿಕೊಂಡರು. ಪ್ರೇಮಸ್ವರೂಪಿಯಾದ ತಾಯಿ ಅಂಬವ್ವ ಹಾಗೂ ಅಜ್ಜಿ

ಗೋದುಬಾಯಿಯವರ ಪ್ರೀತಿಯ ಮಗನಾಗಿ ಬೆಳೆದ ಬೇಂದ್ರೆಯವರ 'ಅಂಬಿಕಾತನಯದತ್ತ' ಕವಿತೆಯಲ್ಲಿ ಕಾವ್ಯದ ಸ್ಥಾಯಿಭಾವ ಮಾತೃಪ್ರಜ್ಞೆಯಿಂದ ಬಿಂಬಿತವಾಗಿರುವುದು ತಿಳಿಯುತ್ತದೆ.

'ನಿನ್ನ ತನುವಿನಿಂದ ಬಂದ ಮುದ್ದುತನಯನೀತನು
ನೀನು ಈಯಲಿತ್ತನು'

ಎಂದು ಹಾಡಿರುವ ಬೇಂದ್ರೆಯವರು ಅಷ್ಟಕ್ಕೇ ಸುಮ್ಮನಾಗದೇ,

'ನಿನ್ನ ಹೆಸರಿನಲ್ಲಿ ನಾನು ಬರೆವುದೇನು ಸೋಜಿಗ
ತಿಳಿಯಲಾರದೀ ಜಗ' (ಗಂಗಾವತರಣ)

ಎಂದು ಹೇಳುತ್ತಾ 'ಅಂಬಿಕಾತನಯದತ್ತ' ಎಂತಲೇ ಕಾವ್ಯಲೋಕಕ್ಕೆ ಚಿರಪರಿಚಿತರಾಗಿರು-ವುದನ್ನು ತಿಳಿಸುತ್ತಾರೆ.

ಇಂತಹ ಬೇಂದ್ರೆಯವರ ಜೀವನದಲ್ಲಿ ಅರ್ಧಾಂಗಿಯಾಗಿ ಬಂದ ತಮ್ಮ ಮಡದಿಯೂ ಸಹ 'ಸ್ತ್ರೀ' ಶಕ್ತಿಯಾಗಿಯೇ ಕಾಣುತ್ತಾರೆ. ಬೇಂದ್ರೆಯವರ ಕಾವ್ಯದ ವೈಚಾರಿಕ ನಿಲುವಿರುವುದು ಅವರ ಪ್ರೇಮತತ್ತ್ವದಲ್ಲಿ ಅವರು ಮಾನವರೂಪದ ನಾವು ಅರ್ಧನಾರೀ ನಟೇಶ್ವರರು ಎನ್ನುತ್ತಾ, ಗಂಡು-ಹೆಣ್ಣು ಪತಿಪತ್ನಿಯರಾಗಿ ಬಾಳ್ವಿಕೆ ಮಾಡತೊಡಗಿದಾಗ, ಸಮಾನತ್ವದ ಹೊಂದಾಣಿಕೆಯ ಸಮರಸಭಾವದಲ್ಲಿ ಜೀವನ ನಡೆಸಬೇಕು; ಆಗ ಮಾತ್ರ ಪ್ರೀತಿ - ಪ್ರೇಮಕ್ಕೆ ನಿಜವಾದ ಅರ್ಥ ಸಿಗುವುದು ಎನ್ನುತ್ತಾರೆ. ದಂಪತಿಗಳು ಪ್ರೇಮ ಸ್ವರೂಪಿಯಾಗಿ ಜೀವನ ನಡೆಸಿದಾಗ, ಹಾಗೂ ಇತರರ ಬಾಳಿಗೆ ಆಶ್ರಯದಾತರಾದಾಗ ಇಡೀ ಜಗತ್ತು ಸಹ ಸಂತಸದಿಂದಿರುತ್ತದೆ. ಜಾತಿ, ಮತ, ಪಂಥಗಳನ್ನು ಬದಿಗೊತ್ತಿ ಹೊಸ ಸಂಸಾರ ಹೂಡಿದಾಗ ಜಗತ್ತಿನಲ್ಲಿ ಶಾಂತಿ ನೆಲೆಸಿ ಲೋಕಕಲ್ಯಾಣವಾಗುತ್ತದೆ ಎಂಬುದು ಅವರ ಕವನಗಳಲ್ಲಿ ಅಭಿವ್ಯಕ್ತವಾಗಿದೆ.

ಬೇಂದ್ರೆಯವರ ಕವನಗಳು ಹೆಚ್ಚು ಸಂಕೀರ್ಣ ಅಭಿವ್ಯಕ್ತಿ ಪಡೆದಿರುವುದನ್ನು ಕಾಣಬಹುದು. ಅವರದು ಈ ನೆಲದ ಸತ್ವವನ್ನೊಳಗೊಂಡ ಪ್ರೀತಿ. ಹಾಗಾಗಿಯೇ ಅವರ ಪ್ರೀತಿಗೆ ಸಿಟ್ಟು, ಸೆಡವು, ಅಸಹನೆ, ಉತ್ಕಟತೆ ಎಲ್ಲವೂ ಸಾಧ್ಯ. ಗಂಡುಹೆಣ್ಣಿನ ಸಂಬಂಧದ ಎಲ್ಲಾ ಭಾವಗಳೂ ಬೇಂದ್ರೆಯವರ ಕವಿತೆಗಳಲ್ಲಿವೆ. 'ನಾನು ಬಡವಿ, ಆತ ಬಡವ ಒಲವೆ ನಮ್ಮ ಬದುಕು' ಎಂದು ಹೇಳುವಲ್ಲಿ ಗಂಡು-ಹೆಣ್ಣಿನ ಅರ್ಥಪೂರ್ಣ ಸಂಬಂಧಕ್ಕೆ ಹಂಬಲಿಸುತ್ತಾರೆ. ಅವರ ಪ್ರೇಮದ ತತ್ತ್ವ ವಾಸ್ತವ ಬದುಕನ್ನು ಎದುರಿಸಲು ಬೇಕಾದ ಮನೋಭಾವವನ್ನು ಸೂಚಿಸುತ್ತದೆ. ಬದುಕಿನ ಕಟುವಾಸ್ತವದ ಫಲವಾಗಿ ಬೇಂದ್ರೆಯವರ ಕವನಗಳಿವೆ.

ಒಟ್ಟಿನಲ್ಲಿ ಬೇಂದ್ರೆಯವರ ಕವಿತೆಗಳು ಬದುಕಿನ ರುದ್ರ ಅರಿವಿನ ಫಲಗಳು. 'ಬೆಂದರೆ ಯಾರೂ ಬೇಂದ್ರೆಯಾಗಬಹುದು' ಎಂದು ಅವರೇ ಹೇಳುತ್ತಿದ್ದರು. ಆದರೆ ನಿಜಕ್ಕೂ ಬೆಂದವರೆಲ್ಲಾ ಬೇಂದ್ರೆ ಆಗಲು ಸಾಧ್ಯವಿಲ್ಲ. ಬೇಂದ್ರೆಯವರಿಗೆ ನೋವನ್ನನುಭವಿಸಿದ್ದರಿಂದ ಆ ನೋವನ್ನು ಕಾವ್ಯವಾಗಿ ಮಾರ್ಪಡಿಸಲು ಸಾಧ್ಯವಾಯಿತು. ಅವರು ತಮ್ಮ ನೋವನ್ನು ಈ ರೀತಿ ಹೇಳುತ್ತಾರೆ.

"ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೆ
ನೀಡುವೆನು ರಸಿಕ ನಿನಗೆ;
ಕಲ್ಲುಸಕ್ಕರೆಯಂಥ ನಿನ್ನೆದೆಯು ಕರಗಿದರೆ
ಅದರ ಸವಿಯನ್ನಷ್ಟೆ ಹಣಿಸು ನನಗೆ"

ಇವರ ಕವನಗಳನ್ನು ಅರ್ಥಮಾಡಿಕೊಳ್ಳಲು ಮಾಗಿರಬೇಕು. ಕವಿ ಸಹೃದಯರ ಸಹಯೋಗವಾಗಬೇಕು. ಆಗ ಮಾತ್ರ ಸಾಂಸಾರಿಕ ಜೀವನದಲ್ಲಿ ಬೇಂದ್ರೆಯವರು ಕಂಡ ಅನುಭವಗಳನ್ನು ಅರಿಯಲು ಸಾಧ್ಯ. ಇದರಿಂದಾಗಿಯೇ ಬೇಂದ್ರೆಯವರ ಕಾವ್ಯಗಳು ನಮ್ಮ ಮನಸ್ಸಿನಲ್ಲಿ ಬೇರೂರಿವೆ.

ಹೀಗೆ ದಾಂಪತ್ಯದ ವಿಷಯವನ್ನು ಕುರಿತು ನಮ್ಮ ಕನ್ನಡ ಕವಿವರ್ಯರ ಕಾವ್ಯಗಳನ್ನು ಆಯ್ದುಕೊಂಡು ವಿಶ್ಲೇಷಿಸುತ್ತ ಹೊರಟರೆ ಒಂದು ಸುದೀರ್ಘ ಪ್ರಬಂಧವೇ ರಚನೆಯಾಗುತ್ತದೆ. ಇದು ಪ್ರೌಢಪ್ರಬಂಧಕ್ಕೆ ಸಂಬಂಧಿಸಿದ ವಿಷಯವಾಗಿದೆ. ಆದರೆ ನಾನು ಸಮಯದ ಮಿತಿಯಿಂದ ಚಿಕ್ಕದಾಗಿ ಚೊಕ್ಕವಾಗಿ ಬರೆಯುವುದು ಅನಿವಾರ್ಯವಾಗಿರುವುದರಿಂದ 'ಬೇಂದ್ರೆ ಅವರ ಕಾವ್ಯಗಳಲ್ಲಿ ದಾಂಪತ್ಯದ ಪರಿಕಲ್ಪನೆ' ಎಂಬ ಶೀರ್ಷಿಕೆಯನ್ನಿಟ್ಟುಕೊಂಡು ನನಗೆ ಲಭ್ಯವಾದ ಮಾಹಿತಿಯ ಆಧಾರದ ಮೇಲೆ ಈ ಪ್ರಬಂಧವನ್ನು ರಚಿಸಿದ್ದೇನೆ.

## ಅನುಬಂಧ

### ಬೇಂದ್ರೆಯವರ ಬರಹಗಳು

೧೯೨೨ – ಕೃಷ್ಣಾಕುಮಾರಿ

೧೯೩೨ – ಗರಿ

೧೯೩೪ – ಮೂರ್ತಿ

೧೯೩೪ – ಕಾಮಕಸ್ತೂರಿ

೧೯೩೭ – ಸಖೀಗೀತ

೧೯೩೮ – ನಾದಲೀಲೆ

೧೯೩೮ – ಉಯ್ಯಾಲೆ

೧೯೪೩ – ಕನ್ನಡ ಮೇಘದೂತ

೧೯೪೬ – ಹಾಡುಪಾಡು

೧೯೫೬ – ಸೂರ್ಯಪಾನ

೧೯೫೬ – ಹೃದಯ ಸಮುದ್ರ

೧೯೫೬ – ಮುಕ್ತಕಂಠ

೧೯೫೭ – ಚೈತ್ಯಾಲಯ

೧೯೫೭ – ಜೀವಲಹರಿ

೧೯೫೭ – ಅರಳು–ಮರಳು

೧೯೫೮ – ನಮನ

೧೯೫೯ – ಸಂಚಯ

೧೯೬೦ – ಉತ್ತರಾಯಣ

೧೯೬೧ – ಮುಗಿಲಮಲ್ಲಿಗೆ

೧೯೬೨ – ಯಕ್ಷಯುಷಿ

೧೯೬೪ – ನಾಕುತಂತಿ

೧೯೬೬ – ಮರ್ಯಾದೆ

೧೯೬೮ – ಶ್ರೀಮಾತಾ

೧೯೭೦ – ಇದು ನಭೋವಾಣಿ

೧೯೭೩ – ಮತ್ತೆ ಶ್ರಾವಣ ಬಂತು

೧೯೭೮ – ಚತುರೋಕ್ತಿ ಮತ್ತು ಇತರ ಕವನಗಳು

**ಮರಣೋತ್ತರ ಕವನ ಸಂಗ್ರಹಗಳು**

೧೯೮೨ – ಪರಾರಿ

೧೯೮೨ – ಕಾವ್ಯವೈಖರಿ

೧೯೮೩ – ಬಾಲಬೋಧೆ

೧೯೮೩ – ತಾ ಲೆಕ್ಕಣಿಕಿ ತಾ ದೌತಿ

೧೯೮೭ – ಪ್ರತಿಬಿಂಬಗಳು

೧೯೮೭ – ಶ್ರಾವಣ ಪ್ರತಿಭೆ

**ಆಯ್ದ ಕವನ ಸಂಕಲನಗಳು**

೧೯೬೯ – ಬಾ ಹತ್ತರ

೧೯೭೨ – ವಿನಯ

೧೯೭೭ – ಒಲವೇ ನಮ್ಮ ಬದುಕು.

**ನಾಟಕಗಳು**

೧೯೩೦ – ತಿರುಕರ ಪಿಡುಗು, ಗೋಲ್, ಸಾಯೋ ಆಟ

೧೯೩೦ – ಉದ್ಧಾರ

೧೯೩೧ – ನಗೆಯ ಹೊಗೆ

೧೯೫೦ – ಹೊಸ ಸಂಸಾರ

೧೯೮೩ – ನಾಟಕ ಸಂಪುಟ (೧೪ ನಾಟಕಗಳು)

**ಹರಟೆ, ನಗೆ–ಹಾಡು ಕಥೆ**

೧೯೪೦ – ನಿರಾಭರಣ ಸುಂದರಿ (ಹರಟೆ, ನಗೆ–ಹಾಡು–ಕಥೆಗಳ ಸಂಗ್ರಹ)

೧೯೯೬ – ಚೀನಾದ ಬಾಳು ಬದುಕು (ಚೀನೀ ಆಧುನಿಕ ಕತೆಗಳ ಕನ್ನಡ ಅನುವಾದ)

**ವಿಮರ್ಶೆ**

೧೯೩೭ – ಸಾಹಿತ್ಯ ಮತ್ತು ವಿಮರ್ಶೆ

೧೯೪೦ – ಸಾಹಿತ್ಯ ಸಂಶೋಧನೆ

೧೯೪೫ – ವಿಚಾರ ಮಂಜರಿ

೧೯೪೭ – ಶ್ರೀ ಅರವಿಂದರ ಆಶ್ರಮ ಮತ್ತು ತತ್ವೋಪದೇಶ

೧೯೫೪ – ಶ್ರೀ ಲಕ್ಷ್ಮೀಶನ ಜೈಮಿನಿ ಭಾರತಕ್ಕೆ ಮುನ್ನುಡಿ

೧೯೫೯ – ಮಹಾರಾಷ್ಟ್ರ ಸಾಹಿತ್ಯ

೧೯೬೨ – ಕಾವ್ಯೋದ್ಯೋಗ (ಮನ್ವಂತರ ಸಾಹಿತ್ಯ ವಿಮರ್ಶೆಗೆ ಮೀಸಲಾದ ನಿಯತಕಾಲಿಕೆ)

೧೯೬೮ – ಕನ್ನಡ ಸಾಹಿತ್ಯದಲ್ಲಿ ನಾಯಕ ರತ್ನಗಳು

೧೯೭೪ – ಸಾಹಿತ್ಯದ ವಿರಾಟ್ ಸ್ವರೂಪ

೧೯೭೬ – ಕುಮಾರವ್ಯಾಸ ಪುಸ್ತಿಕೆ

೧೯೬೫ – ಸಾಹಿತ್ಯಯೋಗ (ಸಾಹಿತ್ಯ ವಿರಾಟ್ ಸ್ವರೂಪದೊಳಗಿನ ಆಯ್ದ ಲೇಖನಗಳ ಸಂಗ್ರಹ)

**ಭಾಷಣಗಳ ಸಂಗ್ರಹ**

೧೯೬೯ – ವಿಶ್ವಧಾರಣ ಸೂತ್ರ ಕೇಂದ್ರ ಸಾಹಿತ್ಯ ಅಕಾಡೆಮಿ ಫೆಲೋಷಿಪ್ ಧಾರವಾಡದಲ್ಲಿ ಪ್ರಧಾನ ಮಾಡಿದಾಗ ಪ್ರಸ್ತುತಪಡಿಸಿದ ಸಂಶೋಧಕ ಪ್ರಬಂಧ.

೧೯೭೨ – ಮಾತೆಲ್ಲ ಜ್ಯೋತಿ – ಅಕಾಡೆಮಿ ಆಫ್ ಜನರಲ್ ಎಜುಕೇಷನ್, ಮಣಿಪಾಲ.

೧೯೭೯ – ಮತಧರ್ಮ ಮತ್ತು ಆಧುನಿಕ ಮಾನವ

**ಸಂಪಾದನೆ**

೧೯೨೮ – ನನ್ನದು ಈ ಕನ್ನಡನಾಡು

೧೯೩೦ – ಹಕ್ಕಿ ಹಾರುತಿದೆ

೧೯೩೯ – ಚಂದ್ರಹಾಸ (ಕವಿ ಲಕ್ಷ್ಮೀಶನ ಜೈಮಿನಿ ಭಾರತದ ಚಂದ್ರಹಾಸ ಕಥಾನಕ)

೧೯೫೭ – ಹೊಸಗನ್ನಡ ಕಾವ್ಯಶ್ರೀ

೧೯೬೫ – ಕನಕದಾಸ ಚತುಶ್ಶತ ಮನೋತ್ಸವ ಸಂಸ್ಕರಣ ಸಂಪುಟ

**ಸಂಪಾದಿತ ಪತ್ರಿಕೆಗಳು**

೧೯೧೯ – 'ವಾಗ್ಭೂಷಣ' ಪತ್ರಿಕೆಯ ಸಂಪಾದಕ ಮಂಡಳಿಯ ಸದಸ್ಯ

೧೯೨೬ – ಸ್ವಧರ್ಮ

೧೯೨೬ – ಜಯ ಕರ್ನಾಟಕ

೧೯೩೮ – ಜೀವನ

**ಅನುವಾದ : ಕನ್ನಡಕ್ಕೆ**

೧೯೨೮ – 'ಉಪನಿಷತ್ ರಹಸ್ಯವು ಅಥವಾ ಭಾರತೀಯ ಆಧ್ಯಾತ್ಮಶಾಸ್ತ್ರ ಪೀಠಿಕೆ'

೧೯೩೬ – ಭಾರತೀಯನ ಜನ್ಮ

೧೯೬೬ – ಗುರುಗೋವಿಂದ ಸಿಂಗ್

೧೯೬೮ – ಕಬೀರ ವಚನಾವಲಿ

೧೯೭೨ – ಭಗ್ನಮೂರ್ತಿ

೧೯೬೭ – ನೂರೊಂದು ಕವನ

**ಇಂಗ್ಲಿಷ್**

1977 – A Theory of Immortality

1981 – Language Mathematics and Truth

**ಮರಾಠಿಯಲ್ಲಿ ಗ್ರಂಥ ರಚನೆ**

೧೯೬೩ – ಸಂತ ಮಹಂತಾಂಚಾ ಪೂರ್ಣ ಶಂಭವಿಟ್ಠಂ

೧೯೬೫ – ಸಂವಾದ (ಕವನ, ವಿಚಾರ, ವಿಮರ್ಶೆ ಸಂಗ್ರಹ)

೧೯೭೨ – ಶಾಂತಲಾ (ಮೂಲ – ಕೆ.ವಿ. ಅಯ್ಯರ್ ಅವರ ಕನ್ನಡ ಕಾದಂಬರಿ)

೧೯೯೧ – ಉಮಾಳಂ (೧೧೩ ಮೂಲ ಮರಾಠಿ ಕವನಗಳ ಸಂಗ್ರಹ)

## ಪರಾಮರ್ಶನ ಗ್ರಂಥಗಳು


೧. ಔದುಂಬರ ಗಾಥೆ, ಅಂಬಿಕಾತನಯದತ್ತರ ಸಮಗ್ರಕಾವ್ಯ, ದ.ರಾ.ಬೇಂದ್ರೆ ಜೀವನ ಮಹಾಕಾವ್ಯ, ಸಂಪುಟ ೬, ಸಂ.: ವಾಮನಬೇಂದ್ರೆ, ದ.ರಾ.ಬೇಂದ್ರೆ ಸಂಶೋಧನಾ ಸಂಸ್ಥೆಯ ಪ್ರಕಟಣೆ.

೨. ಕುವೆಂಪು ಸೂಕ್ತಿಸುಧಾ, ಲೇ: ಹೆಚ್.ನಂಜೇಗೌಡ, ಸರಸ್ವತಿ ಪ್ರಕಾಶನ ಹಾರೋಹಳ್ಳಿ, ಪಾಂಡವಪುರ, ಪ್ರ.ಮು, ೨೦೦೨.

೩. ಕುವೆಂಪು ಕೊಡುಗೆ, ಜಿ.ವರದರಾವ್, ಸಹ್ಯಾದ್ರಿ ಪ್ರಕಾಶನ, ೧೯೮೫.

೪. ಕುವೆಂಪು, ಡಾ. ಪ್ರಧಾನ್ ಗುರುದತ್ತ, ಸಂ.: ಡಾ. ಹಾ.ಮಾ.ನಾಯಕ, ೨೦೦೧, ಮೊದಲ ಮುದ್ರಣ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಲೇಖಕರ ಬದುಕು ಬರಹ.

೫. ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಸುವರ್ಣ ಕರ್ನಾಟಕ, ೨೦೦೬, ಕನ್ನಡ ಸಾಹಿತ್ಯ ಪುನರ್ ಮೌಲ್ಯೀಕರಣಮಾಲೆ, ಸಂ.: ಬರಗೂರು ರಾಮಚಂದ್ರಪ್ಪ, ಪ್ರಕಾಶಕರು: ವಿ.ಎನ್.ಮಲ್ಲಿಕಾರ್ಜುನಸ್ವಾಮಿ, ಇಳಾಮುದ್ರಣ.

೬. ಕೆ.ಎಸ್.ನರಸಿಂಹಸ್ವಾಮಿ, ಡಾ. ರಾಮೇಗೌಡ, ಸಂ: ಡಾ. ಪ್ರಧಾನ್ ಗುರುದತ್ತ, ನವಕರ್ನಾಟಕ ಪ್ರಕಾಶನ, ೨೦೦೫, ಎರಡನೇ ಮುದ್ರಣ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಲೇಖಕರ ಬದುಕುಬರಹ.

೭. ಕನ್ನಡ ಪ್ರತಿಭೆ, ವಿವಿಧ ಲೇಖಕರು, ಸಂ.: ದೇ.ಜವರೇಗೌಡ ಪ್ರಥಮ ಮುದ್ರಣ, ೧೯೮೫, ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ.

೮. ಚಂದನ, ಕೆ.ಎಸ್.ನ ಅಭಿನಂದನಾ ಗ್ರಂಥ, ಸಂ: ಜಿ.ಎಸ್.ಶಿವರುದ್ರಪ್ಪ (ಮೊ. ಮು), ೧೯೭೨.

೯. ಜೇನಾಗುವಾ, ಕುವೆಂಪು, ಆರನೇ ಮುದ್ರಣ, ಉದಯರವಿ ಪ್ರಕಾಶನ, ಜ್ಞಾನಪೀಠ ಪ್ರಶಸ್ತಿ ವಿಜೇತರು, ಬೇಂದ್ರೆ, ಡಾ॥ ಡಿ.ಮಂಗಳಾ ಪ್ರಿಯದರ್ಶಿನಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಸಂ: ಶಾಂತರಸ, ಪ್ರಕಾಶಕರು: ಬಿ.ಎಸ್.ದಕ್ಷಿಣಾಮೂರ್ತಿ.

೧೦. ದ.ರಾ.ಬೇಂದ್ರೆ: ಎನ್ಕೆ ಕುಲಕರ್ಣಿ, ೨೦೦೧, ಮೊದಲ ಮುದ್ರಣ, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್.

೧೧. ಪು.ತಿ.ನ., ಡಾ. ಪ್ರಭುಶಂಕರ, ಸಂ. ಡಾ. ಪ್ರಧಾನ್ ಗುರುದತ್ತ, ಮೊದಲನೆ ಮುದ್ರಣ, ೨೦೦೨, ನವಕರ್ನಾಟಕ ಪ್ರಕಾಶನ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಲೇಖಕರ ಬದುಕು ಮತ್ತು ಬರಹ.

೧೨. ಪು.ತಿ.ನ. ಸಮಗ್ರ ಕವನಗಳು, ಲಿಪಿ ಪ್ರಕಾಶನ, ಬೆಂಗಳೂರು, ೧೯೮೮.

೧೩. ಭುವನದ ಭಾಗ್ಯ, ಬೇಂದ್ರೆ ಸಾಹಿತ್ಯ ಸಮೀಕ್ಷೆ, ಜಿ.ಎಸ್.ಆಮೂರ, ಸ್ನೇಹ ಪ್ರಕಾಶನ, ಪ್ರಥಮ ಮುದ್ರಣ, ೨೦೦೪.

೧೪. 'ಬೇಂದ್ರೆ ಅವರ ಸಾಹಿತ್ಯದಲ್ಲಿ ಸ್ತ್ರೀ ಒಂದು ಅಧ್ಯಯನ', ಡಾ. ಜಿ.ಕೃಷ್ಣಪ್ಪ, ಕಾಮಧೇನು ಪುಸ್ತಕ ಭವನ.

೧೫. ಬರೆಹದಲ್ಲಿ ಬೇಂದ್ರೆಯವರ ಬದುಕು, ಡಾ. ಜಿ.ಕೃಷ್ಣಪ್ಪ, ದ.ರಾ.ಬೇಂದ್ರೆ ರಾಷ್ಟ್ರೀಯ ಟ್ರಸ್ಟ್ ಗ್ರಂಥಮಾಲೆ.

೧೬. ಬಾಹತ್ತರ, ಸಂ. ಡಾ॥ ವಾಮನ ಬೇಂದ್ರೆ, ಮೊದಲ ಮುದ್ರಣ, ೧೯೬೯.

೧೭. ಬೇಂದ್ರೆಯವರ ವಿಭಿನ್ನ ನೆಲೆಗಳು, ಸುಮತೀಂದ್ರ ನಾಡಿಗ, ೧೯೯೮, ಕರ್ನಾಟಕ ಬುಕ್ ಏಜೆನ್ಸಿ.

೧೮. ಬೇಂದ್ರೆ ಸಾಹಿತ್ಯ ವಿಹಾರ, ಸಂ. ಜಿ.ಎಸ್.ಭಟ್ಟ, ಚೇತನಬುಕ್ ಹೌಸ್, ಪ್ರಥಮ ಮುದ್ರಣ, ಮೈಸೂರು.

೧೯. ಯದುಗಿರಿ : ಪು.ತಿ.ನ. ಅಭಿನಂದನ ಗ್ರಂಥ, ೧೯೮೧.

**ಆಕರ ಗ್ರಂಥಗಳು**


೧. ಅನುತ್ತರಾ, ಕುವೆಂಪು, ಉದಯರವಿ ಪ್ರಕಾಶನ, ನಾಲ್ಕನೆಯ ಮುದ್ರಣ.

೨. ಇರುವಂತಿಗೆ, ಕೆ.ಎಸ್.ನರಸಿಂಹಸ್ವಾಮಿ, ಕಾವ್ಯಾಲಯ ಪ್ರಕಾಶನ, ೧೯೯೧.

೩. ಉಂಗುರ, ಕೆ.ಎಸ್.ನರಸಿಂಹಸ್ವಾಮಿ, ಕಾವ್ಯಾಲಯ ಪ್ರಕಾಶನ, ೧೯೯೧.

೪. ಚಂದ್ರಮಂಚಕೆ ಬಾ ಚಕೋರಿ, ಕುವೆಂಪು, ಏಳನೆ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು

೫. ನೆನಪಿನ ದೋಣಿಯಲ್ಲಿ, ಕುವೆಂಪು, ಎಂಟನೆ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು

೬. ದೀಪದ ಮಲ್ಲಿ, ಕೆ.ಎಸ್.ನರಸಿಂಹಸ್ವಾಮಿ, ಕಾವ್ಯಾಲಯ ಪ್ರಕಾಶನ, ೧೯೯೧, ಮೈಸೂರು.

೭. ನಾದಲೀಲೆ, ದ.ರಾ.ಬೇಂದ್ರೆ, ಸಮಾಜ ಪುಸ್ತಕಾಲಯ, ೧೯೭೬, ಧಾರವಾಡ.

೮. ಪ್ರೇಮ ಕಾಶ್ಮೀರ, ಕುವೆಂಪು, ಉದಯರವಿ ಪ್ರಕಾಶನ, ಎಂಟನೆ ಮುದ್ರಣ, ಮೈಸೂರು

೯. ಮಲ್ಲಿಗೆಯ ಮಾಲೆ, ಸಮಗ್ರಕಾವ್ಯ, ೧೯೪೨–೨೦೦೪, ಕೆ.ಎಸ್.ನರಸಿಂಹಸ್ವಾಮಿ ಲಿಪಿ ಪ್ರಕಾಶನ.

೧೦. ಮೈಸೂರು ಮಲ್ಲಿಗೆ, ಕೆ.ಎಸ್.ನರಸಿಂಹಸ್ವಾಮಿ, ೩೫ನೆ ಮುದ್ರಣ, ೨೦೧೧, ಸ್ಟ್ಯಾಂಡರ್ಡ್ ಬುಕ್ ಕಂಪೆನಿ, ಕೆ.ಎಸ್.ನ. ಪ್ರತಿಷ್ಠಾನ.

೧೧. ಸಖೀಗೀತ : ದ.ರಾ.ಬೇಂದ್ರೆ, ೧೯೪೦, ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ.

೧೨. ಸಖೀಗೀತ : ದ.ರಾ.ಬೇಂದ್ರೆ, ಸಂ. ವಾಮನ ಬೇಂದ್ರೆ, ಶ್ರೀಮಾತಾ ಪ್ರಕಾಶನ, ೧೯೯೫.

೧೩. ಹಣತೆ, ಪು.ತಿ.ನ. ಕವನ ಸಂಕಲನ, ೧೯೩೩, ಡಿ.ವಿ.ಕೆ.ಮೂರ್ತಿ (ಪ್ರಕಾಶಕರು).


-----